SAVINUDI. *Reg. No. M. 1146*

# ಸವಿನುಡಿ

## ಸವಿನುಡಿ.

## ಕನ್ನಡ ನುಡಿಯ

## ಮಾಸ ಪುಸ್ತಕಾವಳಿ

ಸಂಪುಟ ೧೭ ಸಂಖ್ಯೆ ೧೯೪ ಸಂಚಿಕೆ ೨

ಭಾರತಿ ಸಂಪಂಗಿರಾಮು,

ಲೇಖಕ, ಸಂಪಾದಕ, ಮತ್ತು ಪ್ರಸಾರಕ.

ಯಾಂತಿನ್ಯಾಯ ಪ್ರವೃತ್ತಸ್ಯ | ತಿರ್ಯಞ್ಚೋಽಪಿ ಸಹಾಯತಾಂ |
ಅಪಂಥಾನಂತು ಗಂತಚ್ಛಂ | ಸೋದರೋಽಪಿ ವಿಮುಂಚತಿ ||

# ಸತೀದೇವಿ.

ಮುಂದೆ ಪ್ರಕಟವಾಗುವುವು,

೨ ಸುನೀತಿ. ೩ ಶಕುಂತಲೆ.



...ರದಾವಿಲಾಸ ಮತ್ತು ಕಾಕ್ಸಟನ್ ಮುದ್ರಣಾಲಯಗಳಲ್ಲಿ ಸಂಪಾ ...ೋಸ್ಕರ ಮುದ್ರಿತವಾಗಿ ಬೆಂಗಳೂರು ಕೋಟೆಯ ಸಿ. ಬೀದಿ ೪೨ನೆಯ ನಂಬರು ಮನೆಯಲ್ಲಿ ಭಾರತಿ ಸಂಪಂಗಿರಾಮನಿಂದ ಪ್ರಕಟಿಸಲ್ಪಟ್ಟಿತು.

## ಕನ್ನಡನುಡಿಯ ಮಾಸಪುಸ್ತಕಾವಳಿ.

### ಬಿಕರಿಗೆ ಸಿದ್ಧವಾಗಿರುವ ಪುಸ್ತಕಗಳು.

**ಅರ್ಧ ಕ್ರಯ !　　ಅರ್ಧ ಕ್ರಯ !!　　ಅರ್ಧ ಕ್ರಯ !!!**

| | |
|---|---|
| 1. ಕಥಾಸರಿತ್ಸಾಗರ. (ಪೂರ್ವಭಾಗ) | 1-8-0 |
| 2. ಮಾಧವೀಕಂಕಣ. | 1-0-0 |
| 3. ಶಕ್ತಿ. | 0-12-0 |
| 4. ಸಾವಿತ್ರೀ. | 0-4-0 |
| 5. ಚಂದ್ರಮತಿ. | 0-4-0 |
| 6. ಸತೀದೇವಿ. | 0-1-0 |
| 7. ಸಂಯುಕ್ತೆ. | 0-4-0 |
| 8. ಗಾಂಧಾರಿ. | 0-4-0 |
| 9. ದಮಯಂತಿ. | 0-4-0 |
| 10. ಪ್ರಶ್ನೋತ್ತರ ಲೇಖ್ಯ ಬೋಧಿನಿ. | 1-8-0 |
| 11. ಆಂಗ್ಲಭಾಷಾಪ್ರವೇಶ ದಾಯಿನಿ ಮೊದಲನೆಯ ಪುಸ್ತಕ | 1-0-0 |
| 12. ಆಂಗ್ಲಭಾಷಾಪ್ರವೇಶ ದಾಯಿನಿ ಎರಡನೆಯ ಪುಸ್ತಕ | 1-0-0 |
| 13. ಆಂಗ್ಲಭಾಷಾಪ್ರವೇಶ ದಾಯಿನಿ ಮೂರನೆಯ ಪುಸ್ತಕ | 1-0-0 |
| 14. ಭಾಷಾನಿಧಿ. (ಒಂಭತ್ತು ಲಿಪಿ, ಒಂಭತ್ತು ಭಾಷೆ) | 1-8-0 |
| 15. ಶ್ರೀವಿವೇಕಾನಂದಸ್ವಾಮಿ. | 0-4-0 |
| 16. ಶ್ರೀವಿವೇಕಾನಂದೋಪನ್ಯಾಸ. | 0-4-0 |
| 17. ಗೀತಾಮೃತಮಹೋದಧಿ. | 0-8-0 |
| 18. ಭೂಮಿಯ ಅಳತೆ. | 0-12-0 |
| 19. ಕನ್ನಡ ಪಂಚತಂತ್ರ. | 0-2-0 |
| 20. ನೀತಿಮಂಜರಿ. | 0-2-0 |
| 21. ಗೀತಾಸಾರ. | 0-2-0 |
| 22. ಸಮಯೋಪಯೋಗ. | 0-2-0 |
| 22. ದಾದಾಭಾಯಿ ನೌರೋಜೀ. | 0-2-0 |
| 24. ತಾರಾನಾಥತರ್ಕವಾಚಸ್ಪತಿ. | 0-1-0 |
| 25. ಶಾಲಿವಾಹನ. | 0-2-0 |
| 26. ಸರ್. ಟಿ. ಮಾಧವರಾವ್. | 0-2-0 |
| 27. ಸುನೀತಿ. | 0-4-0 |
| 28. ಶಕುಂತಳೆ. | 0-4-0 |
| ಒಟ್ಟು | 12-2-0 |

ಅಂಚೆವೆಚ್ಚ ಬೇರೆ,

ಇವೆಲ್ಲಪುಸ್ತಕಗಳನ್ನೂ ಒಂದೇ ಬಾರಿಯಲ್ಲಿ ತರಿಸಿಕೊಳ್ಳುವ ಶಾಶ್ವತ ಚಂದಾದಾರರಿಗೆ ಅಂಚೆಯ ವೆಚ್ಚ ಸೇರಿ ಆರು ರೂಪಾಯಿಗಳಿಗೆ ವಿ. ಪಿ. ಮಾಡುವೆವು.

ಭಾರತಿ ಸಂಪಂಗಿರಾಮು,

ಸವಿನುಡಿಯ ಸಂಪಾದಕ,

42—ಸಿ, ಬೀದಿ, ಕೋಟೆ, ಬೆಂಗಳೂರು.

ಸ ವಿ ನು ಡಿ

# ಸ ತೀ ದೇ ವಿ .

ಹರಿದ್ವಾರದಬಳಿ ಹಿಮಾಚಲದಿಂದ ಭೂತಲಕ್ಕೆ ಗಂಗೆಯು ಪ್ರವಹಿಸುವ ಸ್ಥಳದಲ್ಲಿ ಕನಖಲವೆಂಬ ಪಟ್ಟಣವುಂಟು. ಇದನ್ನು ದಕ್ಷಪ್ರಜಾಪತಿಯು ಆಳುತ್ತಿದ್ದನು.

ದಕ್ಷಪ್ರಜಾಪತಿಯು ಅತುಳಪ್ರತಾಪವುಳ್ಳವನು. ಐಶ್ವರ್ಯದಲ್ಲೂ, ವೀರ್ಯದಲ್ಲೂ, ಪ್ರಪಂಚದಲ್ಲಿ ಬೇರೆ ಯಾರೂ ಆತನಿಗೆ ಸಮಾನರಿಲ್ಲ. ಅದರಲ್ಲೂ ಆತನು ಮಹಾತಪಸ್ಸಂಪನ್ನನು. ಆತನು ಮಾಡಿರುವ ಯಜ್ಞ, ದಾನ, ವ್ರತಾನುಷ್ಠಾನ ಮುಂತಾದುವುಗಳಿಷ್ಟೆಂದು ಹೇಳಲಳವಿಲ್ಲ. ಆದುದರಿಂದ ಜನರು "ಧರ್ಮದಲ್ಲೂ, ಕರ್ಮದಲ್ಲೂ ದಕ್ಷಪ್ರಜಾಪತಿಯ ಸಮಾನರೂ ಇಲ್ಲವೆಂದು ಹೇಳುತ್ತಿರುವರು."

ದಕ್ಷನ ರಾಜಧಾನಿಯಾದ ಕನಖಲನಗರವು ಸೌಂದರ್ಯದಲ್ಲಿ ಅಮರಾವತಿಯನ್ನು ಕೂಡ ಸೋಲಿಸುತ್ತಿರುವುದು. ಸಾವಿರಾರು ವರುಷಗಳು ಕಳೆದರೂ ಕೂಡ, ಕನಖಲ ನಗರದ ಪ್ರಾಕೃತಿಕ ಸೌಂದರ್ಯವು, ಸ್ವಲ್ಪಮಟ್ಟಿಗಾದರೂ ಬದಲಾಯಿಸಿಲ್ಲ. ಈ ಪಟ್ಟಣದ ಸಮೀಪದಲ್ಲೇ ಪರ್ವತಗಳಿಗೆಲ್ಲಕ್ಕೂ ಅರಸಾದ ಹಿಮಾಚಲವು ಶಿಖರದ ಮೇಲೆ ಶಿಖರಗಳನ್ನೇರಿಸಿಕೊಂಡು ಮೇಘಸಂಗ್ರಿಯಂತೆ ನಿಂತಿರುವುದು. [illegible] ಮಹಾಕಾಯ ವೃಕ್ಷ ಘಟಸರ್ಪಾಕಾರವಾಗಿ ಅತ್ಯಂತ ವೇಗವಾಹಿನಿಯಾದ ಗಂಗೆಯು ಕೆಳಭಾಗದಲ್ಲಿ ಹರಿಯುತ್ತಿದೆ. ಕನಖಲ ನಗರದಲ್ಲಿ ಗಂಗೆಯ ಅಪೂರ್ವ ಶೋಭೆಯನ್ನು ಬಣ್ಣಿಸುವುದು ಸಾಧ್ಯವಲ್ಲ. ಗಂಗಾಜಲವು ಸ್ಫಟಿಕದಂತೆ ಸ್ವಚ್ಛವು. ನದೀತಲದಲ್ಲಿರುವ ಸಣ್ಣಸಣ್ಣ ಮೀನುಗಳು ಸೂರ್ಯಕಿರಣಕ್ಕೆ ತಳತಳಗುಟ್ಟುತ್ತ ಅದ್ಭುತವನ್ನೂ, ಆಶ್ಚರ್ಯವನ್ನೂ, ಉಂಟುಮಾಡುವುದು. ಗಂಗಾಜಲವು ಕೆಲವೆಡೆಯಲ್ಲಿ ಪಾದರಸದಂತೆ ಶುಭ್ರವಾಗಿಯೂ, ಕೆಲವೆಡೆ

ಯಲ್ಲಿ ಮೇಘವರ್ಣದಂತೆ ನೀಲವರ್ಣವಾಗಿಯೂ ಶೋಭಿಸುತ್ತಿದೆ. ಗಂಗಾ ಮಹಿಮಾತಿಶಯವನ್ನು ಕಂಡುಕೊಂಡು ಮುಗ್ಧವಾದ ಆರ್ಯರ್ಷಿಗಣವು ಕನಖಲ ಮತ್ತು ಹರಿದ್ವಾರದ ಬಳಿಯಲ್ಲಿ ಗಂಗಾಸಂದರ್ಶನ ಮಾಡತಕ್ಕ ದೆಂದು ಕಟ್ಟುಮಾಡಿಟ್ಟಿರುವರು. ಮಹರ್ಷಿಗಣದ ಅನುಜ್ಞೆಯು ಈಗಲೂ ಆಚರಣೆಯಲ್ಲಿರುವುದು, ತೀರ್ಥಯಾತ್ರಿಕರನೇಕರ ಅನುಭವದಲ್ಲಿದೆ. ಕನಖಲ ನಗರದ ಮಗ್ಗುಲಲ್ಲಿ ಹರಿಯುವ ಗಂಗಾನದಿಗೆ ನೀಲಧಾರೆಯೆಂದು ಹೆಸರು. ದಕ್ಷಪ್ರಜಾಪತಿಯ ಮಣಿಮುಕ್ತಾಮಂಡಿತ ಪ್ರಾಸಾದವು, ಈ ನೀಲಧಾರೆಯ ದಡದಲ್ಲಿರುವುದು. ಮಳೆಗಾಲದಲ್ಲಿ ಗಂಗೆಯು ಆ ಪ್ರಾಸಾದದ ಪಾದತಲವನ್ನು ತೊಳೆಯುತ್ತ ಪ್ರವಹಿಸುತ್ತಿರುವುದರಿಂದ ರಾಜಾಂತಃಪುರವಾಸಿಗಳು ಆ ಸಂಗೀತಶ್ರವಣ ಮಾಡುತ್ತಮಾಡುತ್ತ ನಿದ್ರಾಪರರಾಗಿಬಿಡುವರು.

ದಕ್ಷಪ್ರಜಾಪತಿಗೆ ಬಹುಮಂದಿ ಹೆಣ್ಣುಮಕ್ಕಳಿರುವರು. ಸರೋವರವು ಸ್ಫುಟಿತವಾದ ಪದ್ಮಪುಷ್ಪಗಳಿಂದಲೂ, ಆಕಾಶಮಂಡಲವು ಜ್ಯೋತಿರ್ಮಯವಾದ ತಾರಕಾದಾಮಗಳಿಂದಲೂ, ಶೋಭಾಯಮಾನವಾಗಿರುವಂತೆ, ದಕ್ಷಪ್ರಜಾಪತಿಯ ಭವನವೂ ಕೂಡ ರಾಜಕುಮಾರಿಯರದ್ವಾರ ಅಷ್ಟು ಅಷ್ಟು ಶೋಭಾಯಮಾನವಾಗಿರುವುದು. ಆ ಕನ್ನಿಕೆಯರ ಲೋಕಮೋಹಕ ರೂಪವನ್ನು ನೋಡಿ ರಾಜಮಹಿಷಿಯ ಆನಂದಕ್ಕೆ ಸೀಮೆಯಿಲ್ಲದಿರುವುದು.

ರಾಜಕನ್ನಿಯರು ಪ್ರತಿದಿನವೂ, ನೀಲಧಾರೆಯಲ್ಲಿ ಸ್ನಾನಮಾಡುತ್ತಿರುವರು. ನದಿಯ ಸ್ನಿಗ್ಧಸಲಿಲದಲ್ಲಿ ಅವಗಾಹನಮಾಡಿ ಎಲ್ಲರೂ ಜಲಕ್ರೀಡೆಯಲ್ಲಿ ನಿರತರು. ನದಿಯ ವಾಲುಕಾಮಯ ಪುಲಿನಪ್ರದೇಶದಲ್ಲಿ ಸಂತೋಷದಿಂದೋಡಾಡುತ್ತ, ಅಲ್ಲಿರುವ ನೀಲ, ಪೀತಲೋಹಿತಾದಿಯಾದ ನಾನಾಬಗೆಯ ರಂಗಾದ, ಸಣ್ಣಸಣ್ಣ ಕಲ್ಲುಗಳನ್ನು ಆರಿಸಿ ಮನೆಗೆ ತಂದು ಕೊಳ್ಳುತ್ತಿರುವರು. ಅರಸು ಮತ್ತು ಅರಸಿಯು ಅವನ್ನು ನೋಡಿ ನಗುತ ನಗುತ—

“ನಮ್ಮ ಮನೆಯಲ್ಲಿ ಯಥೇಷ್ಟ ರಮಣೀಯವಾದ ಮಣಿಮೌಕ್ತಿಕಗಳಿರುವಾಗ ನೀವೀ ಕಲ್ಲುಗಳನ್ನಾರಿಸಿ ತಂದೇನಮಾಡುವಿರಮ್ಮಾ?”

ಯೊಂದು ಆಗಿಂದಾಗ ಕೇಳುತ್ತಿರುವರು. ರಾಜಕನ್ಯೆಯರೇನನ್ನೂ ಹೇಳುವುದಿಲ್ಲ. ಆದರೆ ಅವರು ಮುತ್ತು ರತ್ನಗಳನ್ನು ಬಿಸುಟು, ಆ ಕಲ್ಲುಗಳನ್ನೆಲ್ಲ ತಾವು ತಮ್ಮ ತಮ್ಮ ಆಟದಮನೆಗಳಲ್ಲಿ ತುಂಬುತ್ತಿರುವರು. ರಾಜಕನ್ಯೆಯರು ದಿನಕ್ರಮವಾಗಿ ದೊಡ್ಡವರಾಗುತ್ತ ಬಂದರು. ಆಗ ದಕ್ಷಪ್ರಜಾಪತಿಯು ಅತ್ಯಂತ ವಿಜೃಂಭಣೆಯಿಂದ ಅವರ ವಿವಾಹಗಳನ್ನು ನಡೆಸಿದನು. ಹೆಣ್ಣುಮಕ್ಕಳೂ, ಅಳಿಯಂದಿರನ್ನೂ ನೋಡಿ ರಾಜರಾಣಿಯರೂ ಸಂತೋಷಕ್ಕೆ ಪಾರವಿಲ್ಲವಾಯಿತು. ವಿವಾಹವಾದಬಳಿಕ ರಾಜಪುತ್ರಿಯರೊಬ್ಬೊಬ್ಬರಾಗಿ ಶ್ವಶುರಾಲಯಗಳನ್ನು ಹೊಂದಿ, ಸುಖದಿಂದ ಸಂಸಾರಯಾತ್ರೆ ನಡೆಸತೊಡಗಿದರು.

ದಕ್ಷರಾಜನಿಗೆ ಅವಿವಾಹಿತೆಯಾದ ಕನ್ಯೆಯೊಬ್ಬಳೇ ಉಳಿದಿರುವಳು. ಆಕೆಯ ಹೆಸರು ಸತೀದೇವಿ. ಈಕೆಯು ಸರ್ವಕನಿಷ್ಠಪುತ್ರಿಯಾದುದರಿಂದ ತಾಯ್ತಂದೆಗಳಿಗೆ ಬಹು ಪ್ರೀತಿಪಾತ್ರಳು. ಒಂದುದಿನ ಅರಸೂ ಅರಸಿಯೂ ಅಂತಃಪುರದಲ್ಲಿದ್ದಾಗ ಅರಸಿಯು ಅರಸನನ್ನು ಕುರಿತು—

"ನಮ್ಮ ಹೆಣ್ಣುಮಕ್ಕಳೆಲ್ಲರಿಗೂ ಅನುರೂಪರಾದ ವರಗಳೊಡನೆ ಮದುವೆಯಾಯಿತು. ಎಲ್ಲರೂ ಸುಖದಿಂದಿರುವರು. ನಮ್ಮ ಸತಿಗೂ ಕೂಡ ಉತ್ತಮವಾದ ವರನನ್ನು ಹುಡುಕಬೇಕು" ಅಂದಳು. ಅರಸನು "ತಥಾಸ್ತು" ಅಂದನು. ಸತೀದೇವಿಯು ರೂಪಗುಣಶೀಲ ಸಂಪನ್ನತೆಯನ್ನೇನೆಂದು ತಾನೇ ಬಣ್ಣಿಸುವುದು ? ರಾಜಕನ್ಯೆಯರೆಲ್ಲರಿಗಿಂತಲೂ ಆಕೆಯು ಅನುಪಮಸುಂದರಿಯು. ಸತಿಯ ರೂಪ ಆಕೆಯ ಅಂಗವರ್ಣದಿಂದಲೂ, ಆಕೆಯ ಕಣ್ಣು ಮೂಗು ಕಿವಿಗಳ ಘಟನಾವಳಿಯಿಂದಲೂ ನಿರ್ಣಯವಾಗತಕ್ಕುದಲ್ಲ. ಆಕೆಯ ಸೌಂದರ್ಯವೆಲ್ಲವೂ ಆಕೆಯ ಭಾವ, ಮತ್ತು ತೇಜಸ್ಸಿನಿಂದ ಗೊತ್ತಾಗುವುದು. ಆಕೆಯನ್ನು ಎವೆಯಿಕ್ಕದೆ ಯಾರಾದರೆ ಸ್ವಲ್ಪ ಹೊತ್ತು ನೋಡುವರೋ, ಅವರು ಆಶ್ಚರ್ಯಚಕಿತರಾಗುವರು. ಸಾಧುಸನ್ಯಾಸಿಗಳು ಬಾಲಿಕೆಯಾದ ಸತಿಯನ್ನು ನೋಡಿ, ವಿಶ್ವಮಾತೆಯನ್ನು ಕಂಡಂತೆ ಪರವಶತೆಯನ್ನು ಹೊಂದುವರು. ಭಕ್ತಿಭಾವದಿಂದಲೂ, ಉದ್ವೇಗದಿಂದಲೂ ಆಕೆಯನ್ನು ವಂದಿಸುವರು. ಅರಮನೆಯ ಇತರ ರಾಜಕನ್ಯೆಯರ ಪ್ರಕೃತಿಯಂತೆ ಸತೀದೇವಿಯ ಪ್ರಕೃತಿಯಲ್ಲ.

ಇತರ ಕನ್ನೆಯರನ್ನು ಅಶನವಸನಗಳೂ, ವೇಷಭೂಷಣಗಳೂ, ಮರುಳು ಮಾಡುತ್ತಿದ್ದುವು. ಸತೀದೇವಿಗೆ ಅವುಗಳಲ್ಲಿ ಆದರವಿಲ್ಲ. ರಾಜಕನ್ನೆಯರಲ್ಲಿ ಕೆಲವರು ಯಿಂದ್ರಧನುವರ್ಣದ ಸೀರೆಯನ್ನೂ, ಕೆಲವರು ಪಟ್ಟವಸ್ತ್ರ ಸ್ವರ್ಣನೀಲ ಅಂಗಾವರಣವನ್ನೂ ಬಳಸುತ್ತಿರುವರು. ಸತೀದೇವಿಯು ಗೈರಿಕವರ್ಣದ ವಸನವನ್ನೂ, ಗೈರಿಕರಂಜಿತ ಅಂಗಾವರಣವನ್ನೂ ಅಲಂಕರಿಸುವಳು. ಯಿತರ ರಾಜಕನ್ನೆಯರು ಗಜಮುಕ್ತಾಹಾರವನ್ನು ಕಂಠದಲ್ಲಿ ಧರಿಸುವರು. ಕೈಯೊಳು ಪಚ್ಚೆಗಲ್ಲಿನ ಕಂಕಣಧಾರಣ ಮಾಡಿರುವರು. ಸತೀದೇವಿಯ ಕಂಠದಲ್ಲಿ ಸ್ಫಟಿಕಮಣಿಮಾಲೆಯು ರಾಜಿಸುತ್ತಿರುವುದು. ಕರವು ರುದ್ರಾಕ್ಷಿಗ್ರಥಿತವಲಯ ವಿರಾಜಿತವು. ಯಿತರ ರಾಜಕನ್ನೆಯರು ಮೃಗಮದ ಚಂದನಾದಿಗಳನ್ನು ಲೇಪಿಸಿಕೊಳ್ಳುವರು. ಸತೀದೇವಿಗೋ ಲಲಾಟದಲ್ಲಿಯೂ ಅಂಗಾಂಗಗಳಲ್ಲಿಯೂ ತಂದೆಯ ಯಜ್ಞಕುಂಡದ ಭಸ್ಮ ತ್ರಿಪುಂಡ್ರವು ಶೋಭಿಸುತ್ತಿರುವುದು. ಧಾತ್ರಿಯರು ಸಾಹಸದಿಂದ ರಾಜಪುತ್ರಿಕೆಯರ ತಲೆಗೂದಲನ್ನು ಬೆಳೆಸುವರು. ಸತೀದೇವಿಯ ತಲೆಗೂದಲು ಪ್ರಯತ್ನವಿಲ್ಲದೆಯೇ ಬೆಳೆದು, ನೆಲದಮೇಲೇ ಜಾಡುತ್ತಿರುವುದು. ತಣ್ಣೀರಲ್ಲಿ ಮುಳುಗಿ, ಕೂದಲನ್ನಾರಿಸದೆ, ಯಿದ್ದದ್ದಂತೆಯೇ ಜಟೆಯನ್ನು ಬಿಗಿಯುತ್ತಿರುವಳು. ಆದರೂ ತಲೆಯಕೂದಲು ಕೋಮಲವಾಗಿರುವುದು. ರಾಜಮಹಿಷಿಯು ಸತೀದೇವಿಯ ಭಾವವನ್ನು ನೋಡಿ ಬಹುವಾಗಿ ದುಃಖಿಸುವಳು. ಕಿಶೋರಿಯಾದ ಕುಮಾರಿಯು ತನ್ನ ಶರೀರ ಸಂಬಂಧವಾಗಿ ಯೀಬಗೆಯ ಔದಾಸೀನ್ಯವನ್ನು ತೋರಪಡಿಸುತ್ತಿರುವುದನ್ನು ನೋಡಿನೋಡಿ, ಯೆಂತಹ ತಾಯಾದರೆತಾನೆ ಧೈರ್ಯಶಾಲಿನಿಯಾಗಿದ್ದಾಳು? ತಾಯಿಯು ಆಗಾಗ ಸತೀದೇವಿಯನ್ನು ಕುರಿತು —

"ಸತೀ! ನೀನು ದಿನದಿನಕ್ಕೂ ದೊಡ್ಡವಳಾಗುತ್ತಿರುವೆ. ನಿನಗಿನ್ನೂ ಮಕ್ಕಳಾಟಿಕೆಯು ಮರೆತಿಲ್ಲ. ವಯೋವಂತೆಯಾದಂತೆಲ್ಲ, ನೀನು ಪ್ರೌಢೆಯ ಬುದ್ಧಿಗಳನ್ನಿಟ್ಟು ಪಡೆಯುತ್ತ ನಾಗರಿಕತೆಯನ್ನು ಹೊಂದಿ ವೇಷಭಾಷೆಗಳಿಂದ ಆದರಣೀಯಳೆನಿಸಿಕೊಳ್ಳುವಂತವಳಾಗಬೇಕು. ಅದರೊಂದಿಗೆ ಶ್ರೇಷ್ಠತಮಳಾದ ಗೃಹಿಣಿಯಾಗಬೇಕು" ಅಂದಳು. ಸತೀದೇವಿಯು ನಸುನಗುತ ತಾಯೊಂದಿಗೆ "ತಾಯೇ! ಒಳ್ಳೆಯದು; ನಾನು ನಿನ್ನಂತಿರು

ವೆನು." ಕೂಡಲೆ ತನ್ನಲ್ಲಿತಾನು "ಇವರು ಬಿಟ್ಟುಹೋದೆಯುವುದಕ್ಕೂ, ಪೋಷಣೆಯಿಡುವುದಕ್ಕೂ, ಬಲಾತ್ಕರಿಸುವರು. ಇವರಿಂದಲೇ! ನಾನು ಗೃಹಿಣಿಯಾಗುವಂತಿಲ್ಲವಷ್ಟೆ?" ಅಂದುಕೊಂಡಳು.

ದಕ್ಷಪ್ರಜಾಪತಿಯು ಕೂಡ ಸತೀದೇವಿಯ ಸ್ಥಿತಿಯನ್ನು ನೋಡಿ ನೋಡಿ ಮರುಗುತ್ತಿರುವನು. ಆದರೆ ಸತಿಯು, ಸರಳತೆಗೆ ಪ್ರತಿಮೂರ್ತಿಯು, ಮಮತಾಮಯಿ, ಅನುಪಮಯಾದೇವಿ. ಯಾತಹ ಕಠೋರಹೃದಯರಿಗೂ ಆಕೆಯ ಸರಳಮಾರ್ಗವು ಬೋಧಜನಕವಾಗಿರುವುದು. ಆದುದರಿಂದ ಆಕೆಯನ್ನು ಕುರಿತು ಆತನು ತುಟಿಗಳನ್ನಾಡಿಸುವುದಿಲ್ಲ. ವಿಶೇಷತಃ ಸತಿಯಬಳಿಯಲ್ಲೊಂದುಬಗೆಯ ಗುಣವು ನೆಲೆಗೊಂಡಿರುವುದು. ಸತಿಯು ತುಂಬಾ ಅಭಿಮಾನಿನಿಯು; ಸ್ವಲ್ಪ ಗಟ್ಟಿಯಾಗಿ ಮಾತಾಡಿದಾಗ ಆಕೆಯ ನೀಲೋತ್ಪಲಸದೃಶವಾದೆರಡು ಕಣ್ಣುಗಳೂ, ಕಂಬನಿದುಂಬುವುವು. ಆಗ ಆತನು ಸತಿಯಕಡೆಗೆ ಲಕ್ಷ್ಯವಿಟ್ಟು ರಾಜಮಹಿಷಿಯೊಡನೆ "ಬ್ರಹ್ಮದೇವನು ಈ ಸತೀಮಣಿಯನ್ನು ಶುಂಠನಕೈಯಲ್ಲಿಡದಿರಲಿ" ಯೆಂದು ಹೇಳುತ್ತಿರುವನು. ಬರುತಬರುತ ಸತೀದೇವಿಗೆ ವಿವಾಹಯೋಗ್ಯಕಾಲ ಪ್ರೊವಗಿತು. ಆಗ ದಕ್ಷರಾಜನು ಸತೀದೇವಿಗೆ ವರಾನ್ವೇಷಣಕಾರ್ಯದಲ್ಲಿ ಪ್ರವೃತ್ತನಾಗಿ ತನ್ನ ಸೋದರನಾದ ದೇವರ್ಷಿ ನಾರದನನ್ನು ಕುರಿತು "ಹೇ ನಾರದ! ನೀನಾದರೋ, ತ್ರಿಲೋಕಸಂಚಾರಿಯು. ಧನಿ, ದರಿದ್ರನು, ಗೃಹಸ್ಥನು, ಸನ್ಯಾಸಿ, ಮುಂತಾದವರಲ್ಲಿ ನಿನಗೆ ಪರಿಚಯವಿಲ್ಲದವರು ವಿರಳ. ನಮ್ಮ ಸತೀದೇವಿಗೆ ಶ್ರೇಷ್ಠನಾದ ವರನನ್ನು ನೋಡಿರುವೆಯಾದರೆ ಹೇಳು; ನೋಡುವೆನು" ಅಂದನು.

"ಅನುಜ್ಞೆ! ಯೆಂದು ಹೇಳಿ, ನಾರದನು ಪೇರಗೆ ಹೊರಟು ಬಹುದಿನ ಸಂಚಾರಮಾಡಿ ತ್ರಿಕಾಲಜ್ಞಾನಸಂಪನ್ನನಾದ ಆ ನಾರದನು ಹಿಂದಿರುಗಿ ಕನಖಲವನ್ನು ಸೇರಿ, ರಾಜನೂ ರಾಜಮಹಿಷಿಯೂ ಇರುವಾಗ

"ನಾನು ನಮ್ಮ ಸತೀದೇವಿಗೆ ಪ್ರೌಢ ಶ್ರೇಷ್ಠನಾದ ವರನನ್ನು ಗೊತ್ತುಮಾಡಿರುವೆನು. ಸತೀದೇವಿಗೆ ಅವನಕ್ಕೂ ಉತ್ಕೃಷ್ಟನಾದ ವರನಾದವನ್ನೂ ನಾನು ಕಾಣೆನು." ಅಂದಬಳಿಕ ದಕ್ಷರಾಯನು ವಿಸ್ಮಿತನಾಗಿ ಜಿಜ್ಞಾಸುವಾಗುತ್ತಾನೆ.

"ಪಾತ್ರವಾವುದು ? ಸ್ವಲ್ಪ ತಿಳಿಸು." ನಾರದ "ಕೈಲಾಸಪುರದರಸು" ಅಂದನು. ಕೇಳಿ ದಕ್ಷರಾಯನ ಹಣೆಯು ಸ್ವಲ್ಪ ಕುಂಚಿತವಾಯಿತು. ಆದರೆ ಆತನು ಬೇರೆ ಮಾತಾಡುವುದಕ್ಕೆ ಮುಂಚಿತವಾಗಿಯೇ ಅರಸಿಯು ಆ ನಾರದನನು ಹಾಮುಸಿರೊಡನೆ

"ಕೈಲಾಸಪಟ್ಟಣವೆ ? ಅದಾದರೆ ಬಲುದೂರ. ಅತೀವದುರ್ಗಮವಾದ ದೇಶ. ಸತಿಗೆ ಮದುವೆಯಾದಬಳಿಕ ಆಕೆಯನ್ನು ನಾವು ಸರ್ವದಾ ನೋಡುತ್ತಿರುವಂತಿಲ್ಲ. ಆಕೆಯೊಡನೆ ಪ್ರೀತಿಯೊಡನೆ ಮಾತಾಡುವಂತಿಲ್ಲ. ಪರಸ್ಪರ ಸುಖದುಃಖದೂರರು."

ನಾರದ—"ಅರಸಿ ! ನಿಮಗಾವುದಕ್ಕೆ ಅಭಾವವೋ ನಾನರಿಯೆನು. ದೂರವಾದಷ್ಟಕ್ಕೆ ಸತಿಯೊಡನೆ ಮಾತಾಡುವುದಕ್ಕಾಗುವುದಿಲ್ಲವೇ ? ಬಿಡ್ಡೆಯದು; ನಿಮಗೆ ಯಾವಾಗಲೂ ಆಕೆಯನ್ನು ನೋಡುತ್ತಿರುವುದು ದೊಡ್ಡದೋ ? ಆಕೆಯನ್ನು ಸುಪಾತ್ರದಲ್ಲಿ ಅರ್ಪಿಸುವುದು ದೊಡ್ಡದೋ ? ಸತೀದೇವಿಯು ನಿತ್ಯಸುಖಿಯಾಗಿದ್ದಾಗ ನೀವು ಆಕೆಯನ್ನು ಸರ್ವದಾ ನೋಡಿ ಮಾತಾಡದಿದ್ದರೆ ಕೆಡುಕೇನು ?"

ಅರಸನೂ ಅರಸಿಯೂ ಪ್ರಾಪ್ತ್ಯಗೆಯಿಂದ ತಲೆದೂಗಿ ಬಾಧಕವಿಲ್ಲೆಂದರು.

ದಕ್ಷ—"ವರನ ವಿದ್ಯಾವಿವೇಕಸಂಪನ್ನತೆಯೆಂತಹುದು ?

ನಾರದ—"ಅದಕ್ಕೆ ಹೋಲಿಕೆಯಿಲ್ಲ. ವೇದ, ಪುರಾಣ, ತಂತ್ರ ಅಷ್ಟೇಕೆ ? ಸಮಸ್ತ ಶಾಸ್ತ್ರಗಳೂ ಆತನಿಗರಿವು. ಆತನ ವಿದ್ಯಾಬುದ್ಧಿವಿವೇಕವನ್ನು ಕುರಿತು ಬಣ್ಣಿಸಬೇಕಾದರೆ ನನಗೆ ಶಕ್ತಿಸಾಲದು. ವಸಿಷ್ಠಮಹರ್ಷಿಯು ವೇದತ್ರಯವನ್ನೂ, ಪರಶುರಾಮನು ಧನುರ್ವೇದವನ್ನೂ, ನಾನು ಗಂಧರ್ವವೇದವನ್ನೂ, ಆತನಬಳಿಯಲ್ಲೇ ಉಪದೇಶಗ್ರಹಣಮಾಡಿದವರು" ಎಂದು ಹೇಳಲು ದಕ್ಷರಾಯನ ಮುಖವಿಕಾಸವಾಗಿ "ಹೇ ನಾರದ ! ಆತನ ಬಲವೀರ್ಯವೆಂತು ?"

ನಾರದ—"ಪಿನಾಕಿ" ಎಂಬ ಹೆಸರುಳ್ಳುದು ಆತನ ಧನುಸ್ಸು. ಈ ಧನುಸ್ಸನ್ನು ಮೇಲಕ್ಕೆತ್ತುವಮಟ್ಟಿಗೆ ಎಷ್ಟೆಷ್ಟೋ ರಾಜಾಧಿರಾಜರು

ಪ್ರಯತ್ನಪಟ್ಟು ಭಗ್ನಮನೋರಥರಾದರು. ಲೋಕಕಂಟಕರಾದ ಆ ತ್ರಿಪುರಾಸುರರನ್ನು ಸಂಹರಿಸಿದುದು ಈ ಮಹಾಧನುವಿನಿಂದಲೇ" ಎಂದನು.

ಅರಸಿ—"ಆಳು ಆಕಾರದಲ್ಲಿ ಹೇಗಿರುವನು."

ನಾರದ—"ಅದನ್ನು ನಾನೇನೆಂದು ಬಣ್ಣಿಸಲಿ ? ಶಾಲವೃಕ್ಷದಂತೆ ದೃಢೋನ್ನತದೇಹವು, ಆಜಾನುಬಾಹುಗಳು, ಆಕರ್ಣವಿಶ್ರಾಂತನಯನಗಳು, ರಜತಗೌರವರ್ಣ, ಸರ್ವದಾ ! ಪ್ರಸನ್ನವದನ, ಯಿಂತಹ ಸ್ಫುರದ್ರೂಪವು ಬೇರೆ ಯಿನ್ನೆಲ್ಲಿಯೂ ಕಾಣದು. ಇದು ಸತೀದೇವಿಯ ದಕ್ಷಿಣಭಾಗದಲ್ಲಿಯೇ ಶೋಭಿಸತಕ್ಕುದು." ಯಿಂತೆಂದು ಹೇಳಿ ನಾರದನು ಸುಮ್ಮನಾದನು.

ಸತೀದೇವಿಯ ಸಖಿಯಾದ ವಿಜಯೆ ಯೆಂಬಾಕೆಯು ಕಾರ್ಯಾಂತರದಿಂದ ರಾಜಮಹಿಷಿಯಬಳಿಗೆ ಬಂದಿದ್ದವಳು ಸತೀದೇವಿಯ ವಿವಾಹವಿಚಾರವೆಲ್ಲವನ್ನೂ ಕೇಳುತಿದ್ದಳು. ಕೂಡಲೆ ಸಂಭ್ರಮಗೊಂಡು ಸತೀದೇವಿಯ ಸನ್ನಿಧಿಯನ್ನು ಸೇರಿ —

ಸತಿ ! ನಿನ್ನ ಮನೋಭೀಷ್ಟವು ಸಿದ್ಧಿಸಿತು. ನೀನಿಷ್ಟುದಿನವೂ ಯಾವಾತನನ್ನುದ್ದೇಶಿಸಿ ದೇವಿಯನ್ನು ಪೂಜಿಸುತಿದ್ದೆಯೋ, ಆ ಕೈಲಾಸಪತಿಯೊಡನೆಯೇ, ನಿನಗೆ ವಿವಾಹ ಸಮಾರಂಭವು ಅತ್ಯಂತಶೀಘ್ರವಾಗಿ ನಡೆಯುವಂತೆ ಗೊತ್ತಾಯಿತು. " ಅಂದಳು.

ಸತೀದೇವಿಯು, ಯಾವ ಮಾತನ್ನೂ ಆಡದೆ, ತನ್ನೆರಡು ಕೈಗಳ ಚಂಪಕ ಕಲಿಕಾನಿಭಾಂಗುಲಿಗಳನ್ನು ಜೋಡಿಸಿ, ಉತ್ತರಾಭಿಮುಖವಾಗಿ ನಿಂತು, ನಮಸ್ಕರಿಸಿದಳು.

ಇತ್ತ ನಾರದಮುನಿಯೊಡನೆ ಅರಸಿಯು

" ವರನ ಧನಸಂಪತ್ತೆಷ್ಟರಮಟ್ಟಿನದೋ ?

ನಾರದ—" ರತ್ನಗರ್ಭಿತ ಕೈಲಾಸವೇ ಆತನ ರಾಜ್ಯವು, ಯಕ್ಷರಾಜನಾದ ಕುಬೇರನೇ ! ಆತನಿಗೆ ಕೋಶಾಧ್ಯಕ್ಷನು.

ಇದಕ್ಕೂ ಹೆಚ್ಚಾಗಿ ಹೇಳಬೇಕಾದುದಿಲ್ಲ. ರತ್ನಪ್ರಿಯೆಯಾದ ಯಾವ ಅರಸಿತಾನೇ ಕುಬೇರನ ಹೆಸರನ್ನು ಕೇಳಿ ಅರಿಯಳು ? ಪಚ್ಚೆ, ಮುತ್ತು, ಮರಕತ, ಮಾಣಿಕ್ಯ, ವೈಡೂರ್ಯ, ಮುಂತಾದ ರತ್ನಸಮುದಾಯವು ಕುಬೇ

ರನೊಬ್ಬಾತನಲ್ಲಿ ಅಲ್ಲದೆ ಬೇರೆ ಯಾರಲ್ಲಿತಾನೇ ಇರುವುದು? ಅಂತಹ ಕುಬೇರನೇ ಕೋಶಾಧ್ಯಕ್ಷನಾಗಿರುವಂತಾತನ ಸಂಪತ್ತಿನ ಪರಿಮಿತಿಯು ನ್ನಾರುತಾನೇ ಗೊತ್ತುಮಾಡಲು ಶಕ್ತರಾದಾರು?"

ಅರಸಿ—ವರನತಾಯ್ತಂದೆ, ಅಣ್ಣ, ತಮ್ಮ, ಮೊದಲಾದಬಂಧುವರ್ಗ?

ನಾರದ—ನಗುತ, ವರನವಿಚಾರದಲ್ಲಿ ಯಿದೊಂದು ಮಟ್ಟಿಗೆ ದೋಷ! ಯಿಾತನಿಗೆ ಕುಲವಿಲ್ಲ, ಗೋತ್ರವಿಲ್ಲ, ತಾಯ್ತಂದೆಗಳಿಲ್ಲ. ಸಮಸ್ತ ಪ್ರಪಂಚಕಕ್ಕೂ ಈತನು ಬಾಂಧವನು." ಆದರೆ ಅರಸಿ! ಮದುವೆಯಾದ್ದೇ, ನಮ್ಮ ಸತೀದೇವಿಯು ಕೈಲಾಸಕ್ಕೆ ಸರ್ವೇಶ್ವರಿಯಾಗುವಳು."

ಅರಸಿಯು ನಾರದನ ಕಡೆಗೆ ತೀವ್ರವಾದ ಕಟಾಕ್ಷದೃಷ್ಟಿಯಿಂದ ನೋಡಿದಳು. ನಾರದನು ಮರಳಿ

"ಅರಸಿ! ವರನ ಸಂಬಂಧವಾಗಿ ನನಗೆ ತಿಳಿದ ಸಂಗತಿಗಳೆಲ್ಲವನ್ನೂ ಹೇಳಿರುವೆನು. ಯಿವುಗಳಲ್ಲಿ ಗುಣವಾವುದೋ, ದೋಷವಾವುದೋ, ಚೆನ್ನಾಗಿ ವಿಚಾರಮಾಡಿ, ನಿಮ್ಮ ಯಿಚ್ಛೆಯಂತೆ ಮಾಡಬಹುದು. ನನ್ನ ಕಡೆಗೆ ದೋಷವನ್ನೆಳಸಬಾರದು. ವರನಿಗೆ ಸಂಸಾರದಲ್ಲಿ ತುಂಬಾ ಉದಾಸೀನ, ವಾಸಸ್ಥಳವೋ ಸ್ಮಶಾನ, ಚಂದನವೂ, ಚಿತಾಭಸ್ಮವೂ, ಆತನಿಗೆ ಸಮಾನ. ಆವಾಗನೋಡಿದರೂ ಚಿಂತಾಮಗ್ನನು. ಆದರೆ ಆತನ ಚಿಂತೆಯು ಪಾರ್ಥಿವಪದಾರ್ಥಗಳೊಂದರಲ್ಲಿಯೂ ಇರುವುದಿಲ್ಲ. ಜಗತ್ತಿನ ಸುಖಕ್ಕೋಸ್ಕರ ಆತನು ಸರ್ವದಾ ಶ್ರಮಪಡುತಿರುವನು. ಸ್ಮಶಾನದಲ್ಲಿ ಶವಾಸ್ಥಿಪರೀಕ್ಷೆಯಲ್ಲಿಯೂ, ವನಮೂಲಿಕೆಗಳ ಗುಣಾವಗುಣವಿಮರ್ಶೆಯಲ್ಲಿಯೂ, ಗಿರಿಗುಹೆಗಳೊಳಗಿನ ಖನಿಜಪದಾರ್ಥಗಳ ತತ್ವನಿರೂಪಣೆಯಲ್ಲಿಯೂ, ಆತನ ಅಮೂಲ್ಯವಾದ ಸಮಯವು ವಿನಿಯೋಗವಾಗುತಿರುವುದು. ತತ್ವನಿರೂಪಣಾಸಂಧಿಯಲ್ಲಿ ಆತನು ಕಾಲಕೂಟವಿಷಪಾನದಲ್ಲಿಯೂ, ವಿಷಧರ ಧಾರಣೆಯಲ್ಲಿಯೂ, ಹಿಂದೆಗೆಯಲಿಲ್ಲ. ಈ ಸಂಭವದಲ್ಲಿಯೇ, ಆತನು ಗೃಹಸ್ಥನಾಗಿದ್ದುಕೂಡ ಸನ್ಯಾಸಿಯಂತೆಯೂ, ರಾಜಾಧಿರಾಜಕಿರೀಟಿಯಾಗಿಯೂ, ಭಿಕ್ಷುಕನಂತೆಯೂ, ಇರುವನು. ಯಿದುವರೆಗೆ ನಾನು ವರನ ಗುಣ, ದೋಷ, ಆಚಾರವಿಚಾರ ಮೊದಲಾದುವುಗಳೆಲ್ಲವನ್ನೂ ವಿವರಿಸಿ

ದ್ದೆವು. ಈಗ ನೀವು ದಂಪತಿಗಳು ಯೋಚಿಸಿ ಯಿಚ್ಛೆಬಂದಂತೆ ನಡೆಸಬಹುದು." ಎಂದು ಸುಮ್ಮನಾದನು.

ಇವೆಲ್ಲವನ್ನೂ ಕೇಳಿ ದಕ್ಷನಮುಖವು ಪ್ರಸನ್ನವಾಯಿತು. ಆತನು ಮರಮರಳಿ ತಲೆದೂಗುತ್ತಿದ್ದನು. ಅಷ್ಟರೊಳು ಅರಸಿಯ ಪ್ರವೀಣೆಯಾದ ಪರಿಚಾರಿಕೆಯೊಬ್ಬಳು ಪ್ರವೇಶಿಸಿದಳು.

ಅರಸಿಯ ಮುಖಮುದ್ರೆಯನ್ನು ನೋಡಿ "ಒಡತಿಯೇ! ಸತೀದೇವಿಯು ಪ್ರಾಪ್ತವಯಸ್ಕಳಾದಳು. ತಾಯ್ತಂದೆಗಳು ಸಕಾಲದಲ್ಲಿ ಸತ್ಕುಲಪ್ರಸೂತನೂ, ಸಕಲೈಶ್ವರ್ಯಸಂಪನ್ನನೂ, ಆದ ವರನನ್ನು ಹುಡುಕಿ ಆತನ ಕೈಯಲ್ಲಿಡುವುದು ಧರ್ಮವೆಂಬುದನ್ನು ತಮ್ಮ ಸನ್ನಿಧಿಯಲ್ಲಿ ಅರಿಕೆ ಮಾಡಲು ನಾನು ದಾಸಿ; ಯೆಷ್ಟರವಳು? ತಮ್ಮ ಹೆಣ್ಣುಮಕ್ಕಳಲ್ಲಿ ಯೆಲ್ಲರೂ ತಕ್ಕಸ್ಥಳವನ್ನು ಸಕಾಲದಲ್ಲಿಸೇರಿ ಸುಖವಾಗಿರುವರು. ಸತೀದೇವಿಯ ಸಂಗತಿಯು ತಮಗೂ ಮಹಾರಾಜರಿಗೂ, ಮನವರಿಕೆಯಾಗಲಿಲ್ಲವೇಕೋ, ನಾನರಿಯೆ; ಹೇಗಾದರೂ, ಬಂದುತಿಂಗಳೊಳಗಾಗಿಯೇ ನಮ್ಮ ಸತೀದೇವಿಗೆ ಮದುವೆಯಾಗಲೇ ಬೇಕೆಂದು ನಾನು ಅತ್ತುಬಿನ್ನ ಬೇಡಿಕೊಳುವೆನು." ಅಂದಳು.

ಅರಸಿ—ಸಿಟ್ಟುಸಿಡುಬಿಟ್ಟು "ಸಕಲಗುಣಸಂಪನ್ನನನ್ನು ಯೆಲ್ಲಿತಾನೇ ಅರಿಸುವುದು? ಮಗಳನ್ನು ತಕ್ಕ ಸ್ಥಳದಲ್ಲಿ ಸೇರಿಸುವುದು ತಾಯ್ತಂದೆಗಳ ಕರ್ತವ್ಯವೇ ಸರಿ; ನಾವು ಯಾರಿಗಾದರೆ ಕೊಟ್ಟು ಧಾರೆಯೆರೆಯುವೆವು; ಆತನೆಂತಹನಾದರೂ, ಆತನಲ್ಲಿಯೇ, ನಮ್ಮ ತನುಜೆಯು ಅನುರಕ್ತಳಾಗಿರಬೇಕಲ್ಲದು. ರೂಪದಲ್ಲಿ, ಗುಣದಲ್ಲಿ, ಸಂಪತ್ತಿನಲ್ಲಿ, ಧೈರ್ಯಸಾಹಸಗಳಲ್ಲಿ ಅಸಮಾನವಾಗಿರುವಾತನ ಕೈಯೊಳೇ ಸತೀದೇವಿಯನ್ನಿಡಬೇಕೆಂಬುದು ನನ್ನ ಮತ್ತು ಮಹಾರಾಜನ ಅಭಿಪ್ರಾಯವು." ಅಂದಳು. ಕೂಡಲೆ

ದಕ್ಷ—"ಅರಸಿ! ಬ್ರಹ್ಮಘಟನೆಯನ್ನು ನಾನು ಅರಿತೆನು. ಮಗಳು ಯೆಂತಹ ಗುಣವಂತೆಯೋ, ಅಂತಹ ಗುಣಸಂಪನ್ನನನ್ನೇ ಅರಿಸಬೇಕೆಂಬ ನಿನ್ನ ನನ್ನ ಸಂಕಲ್ಪಗಳೀಗ ಸಿದ್ಧಾರ್ಥಕವಾಗಲಿಲ್ಲ. ಸತೀದೇವಿಗೆ ಅನುರೂಪನಾದ ಪ್ರಾಸ್ತಾವಿಕ ವರನೇ ಸರಿಯೆಂದು ಸ್ಥಿರಪಡಿಸಿದೆನು."

ಕೈಲಾಸಪತಿಯ ಸಂಗಡ ಸತೀದೇವಿಯ ವಿವಾಹವು ಸ್ಥಿರಪಟ್ಟಿತು.

ಮಹಾರಾಜನಾದ ದಕ್ಷಪ್ರಜಾಪತಿಯು ಸತೀದೇವಿಯ ಮದುವೆಯ ಸಮಾರಂಭದಲ್ಲಿ ಪ್ರವೃತ್ತನಾದನು.

ಶುಭದಿನದಲ್ಲಿ ವಿವಾಹಲಗ್ನವು ಗೊತ್ತಾಯಿತು. ರಾಜಭವನವು ಸರ್ವಾಲಂಕಾರಶೋಭಿತವಾಯಿತು. ಅರಮನೆಯಲ್ಲಿ ರಾಜಕುಮಾರಿಯರು ರಾಜಭೂಷಣಯುಕ್ತರಾಗಿ ಸೊಂಪಾಗಿರುತ ಸಂಭ್ರಮಗೊಂಡಿದ್ದರು. ಕೈಲಾಸಪತಿಯವಿಚಾರವಾಗಿ ನಾರದಮಹರ್ಷಿಯು ಹೇಳಿದ್ದ ಸಮಸ್ತ ಸಂಗತಿಯೂ ಅನುಭವಕ್ಕೆ ಬಂದಿತು.

ಪೂರ್ಣಚಂದ್ರನಿಗೆ ಸಮಾನವಾದ ಆತನ ಮುಖದ ಜಟಾಜೂಟ ಭಸ್ಮತ್ರಿಪುಂಡ್ರಗಳ ಶೋಭಾಪ್ರಕಾಶವನ್ನು ನೋಡುತಿರುವ ರಾಜಮಹಿಷಿಯೂ, ರಾಜಕುಟುಂಬಿಕರೂ, ಪಟ್ಟಣವಾಸಿಗಳೂ, ಮೂಗಿನಮೇಲೆ ಬೆರಲಿಟ್ಟು ಆಶ್ಚರ್ಯಚಕಿತರಾದರು. ಸುವಾಸಿನಿಯರೆಲ್ಲರ ಏಕವಾಕ್ಯತೆಯು ಸತೀದೇವಿಗೆ ತಕ್ಕವರನೆಂಬ ಸಂಭ್ರಮಧ್ವನಿಯು ವಿವಾಹಮಂಟಪವೆಲ್ಲವೂ, ತುಂಬಿತು. ವೊಂದು ಸಂಗತಿಯಲ್ಲಿಮಟ್ಟಿಗೆ ರಾಜಮಹಿಷಿಗೆ ಬಹುವಾಗಿ ವ್ಯಥೆಗೆ ಅವಕಾಶವಾಯಿತು. ಅತುಳೈಶ್ವರ್ಯಸಂಪನ್ನನೆಂದು ನಾರದರು ಹೇಳಿದುದಕ್ಕೆ ವಿರೋಧವಾಗಿ ಮದುವೆಯದಿನವೇ, ಮದವಣಗಿತಿಯು ಕೊರಲಲ್ಲಿ ರುದ್ರಾಕ್ಷಿಮಾಲೆಯೂ, ಮೈಯಲ್ಲಿ ವಿಭೂತಿರಾಗವೂ, ಕಟಿಪ್ರದೇಶದಲ್ಲಿ ಹುಲಿದೊಗಲೂ, ಮಾತ್ರವಾದ ತನ್ನ ವೇಷಭೂಷಣವೇ ರಾಜಕುಮರಿಯಾದ ಸತೀದೇವಿಗೂ, ತಂದಿರುವನು. ವಿವಾಹಸಮಾರಂಭದಲ್ಲಿ ಸತೀದೇವಿಗೆ ವಸ್ತ್ರಾಲಂಕಾರಗಳನ್ನು ರಾಜಮರಿಯಾದೆಗೆ ತಕ್ಕಂತೆ ಮುಂದಿಯು ಮೆಚ್ಚುಕೆಗೆ ಅವಕಾಶವಾದ ಈ ಸಮಯದಲ್ಲಿಲ್ಲದೆ ಯಿನ್ನಾವಾಗತಾನೇ ತರುವುದು ? ನಾರದಮಹರ್ಷಿಯು ಸುಳ್ಳು ಹೇಳುವಾತನೇನೋ ಅಲ್ಲ. ಆದರೆ ಆ ಮಹರ್ಷಿಯು ಯಿಾಗುಟ್ಟನ್ನು ಅರಿತಿಲ್ಲವೇನೋ ? ” ಈತೆರನ ಅರಸಿಯು ಅನುತಾಪಸೂಚಕವಾದ ಆಲೋಚನೆಯನ್ನರಿತು ಕುಟುಂಬದಲ್ಲಿ ಪ್ರಮುಖಳೂ, ಚತುರೆಯೂ, ಆದ ವೃದ್ಧೆಯು

“ಅಳಿಯಂದಿರಿಗೆ ತಾಯ್ತಂದೆಗಳಿಲ್ಲ. ಬಂಧುವರ್ಗವೂ ಇಲ್ಲ. ಮತ್ತೆ ಆತನಿಗೆ ವಿವಾಹೋಪಕರಣಗಳನ್ನು ಒಳಪಡಿಸಿಕೊಡುವಂತಹರಾರು ? ತಾನೊಬ್ಬನೇ ಸಿದ್ಧಪಡಿಸಿಕೊಳ್ಳುವುದಕ್ಕೆ ಶಕ್ತನಲ್ಲ. ಆತನು ಹೋಗಿದ್ದನೋ

ಹಾಗೆಯೇ ಮದುವೆಗೆ ತಾನು ಬರುವುದಲ್ಲದೆ ಮದವಣಿಗಿತಿಗೂ ಅದೇ ವೇಷವನ್ನೇ ಅಳವಡಿಸಿದನು.''

ಮತ್ತೊಬ್ಬಾಕೆ—''ಸತೀದೇವಿಯು ಐಶ್ವರ್ಯವತಿಯೇ ಸರಿ; ವಸ್ತ್ರಾಭರಣಗಳಿಲ್ಲದಿದ್ದರೂ ಆಕೆಯ ಮುಖಕಾಂತಿಯು ಸಮಸ್ತೈಶ್ವರ್ಯಸಂಪನ್ನೆಯೆಂಬುದನ್ನು ಸೂಚಿಸುವುದು. ಮೇಲೂ ರಾಜಕುಟುಂಬದಲ್ಲಿ ಯಾವುದಕ್ಕೆ ತಾನೇ ಏನು ಕೊರತೆ ? ಹತ್ತು ಮಂದಿ ಹೆಣ್ಣುಮಕ್ಕಳನ್ನು ಪರಿಪಾಲಿಸುವುದರಲ್ಲಿ ನಿಮಗೆ ಕಷ್ಟ ತೋರಲಿಲ್ಲ. ನಮ್ಮ ಸತೀದೇವಿಯು ನಿಮಗೂ ಮಹಾರಾಜನಿಗೂ ಪ್ರೇಮಪುತ್ರಿಯಷ್ಟೆ ?''

ಈ ಮಾತುಗಳು ಅರಸಿಗೆ ಅಷ್ಟು ಹಿತವಾಗಿ ತೋರಲಿಲ್ಲ. ಯೋಚನಾಸಿಮಗ್ನಳಾದ ರಾಜಮಹಿಷಿಯು ನಾರದರನ್ನು ಕುರಿತು

ಅರಸಿ—''ನಾರದರೇ ! ಅಳಿಯಂದಿರ ಐಶ್ವರ್ಯವನ್ನು ಕುರಿತು ನೀವು ವಿವರಿಸಿದಿರಿ ? ಪ್ರತ್ಯಕ್ಷದಲ್ಲಿ ಅದು ವಿಪರೀತವಾಗಿ ಕಾಣುತಿದೆ. ನಮ್ಮ ಸತೀದೇವಿಗೆ ವಿವಾಹಮಹೋತ್ಸವಾರಂಭ ಸಮಯದಲ್ಲಿ ಸಾವಿರಾರು ಮಂದಿ ತುಂಬಿದ ರಾಜಸಭೆಯಲ್ಲಿ ಅಳಿಯಂದಿರು ವಧುವಿಗೋಸ್ಕರ ತಂದ ಮಂಗಳದ್ರವ್ಯಗಳಲ್ಲಿ ಪ್ರಾಮುಖ್ಯವಾದುವು ವಿಭೂತಿ, ರುದ್ರಾಕ್ಷಮಾಲೆ, ಸ್ಫಟಿಕದಲಯ, ಯಿವುಗಳಲ್ಲದೆ ಪ್ರೇಮಜತೆ ಕೈಬಳೆಯಾದರೂ ಇರಬೇಡವೇ ? ನನ್ನ ಮಗಳು ಯೋಗಿನಿಯಲ್ಲವಷ್ಟೆ ? ಮುಂದಿಯಲ್ಲಿ ಅಳಿಯಂದಿರಿಗೆ ತಾನೇ ಮರಿಯಾದೆಯಿದ್ದೀತೇ ?'' ಅಂದಳು.

ನಾರದ—ಅರಸೀ ! ನಮ್ಮ ಮಾತು ಸುಳ್ಳಾಗುವುದಿಲ್ಲ. ತಮ್ಮ ಮಗಳು ಸತೀದೇವಿಯು ಸತ್ಯವಾಗಿಯು ರಾಜರಾಜೇಶ್ವರಿಯಾದಳು. ಈ ಸಮಯದಲ್ಲಿ ಯಿಲ್ಲಿ ಯಾವ ಮಾತೂ ಆಡಬಾರದು. ಸತೀದೇವಿಯೂ ಪತಿಯು ಗೃಹವನ್ನು ಕುರಿತು ಪ್ರಯಾಣವಾದಾಗ ನಿಮ್ಮ ಅಳಿಯಂದಿರ ಐಶ್ವರ್ಯವನ್ನೂ ಆಕೆಯ ವೇಷಭೂಷಣಗಳಲ್ಲದೆ ಸಂಸಾರಯಾತ್ರೆಯಲ್ಲಿ ಸ್ವಾತಂತ್ರ್ಯ ಮತ್ತು ಅನುರಾಗವನ್ನೂ, ಪ್ರತ್ಯಕ್ಷವಾಗಿ ನೋಡಬಹುದು. ಈತೆರನಾದ ನಾರದರ ವಾಕ್ಯವನ್ನು ಕೇಳಿ ಅರಸಿಯು ಸಂತುಷ್ಟಚಿತ್ತಳಾದಳು.

ವಿವಾಹಸಮಯದಲ್ಲಿ ಅಳಿಯನ ಮತ್ತು ಆತನ ಪರಿವಾರದ ವೇಷಭೂ

ಷೆಗಳೂ, ಭಾವಭಂಗಿಗಳೂ, ಮಹಾರಾಜನಾದ ದಕ್ಷನಿಗೂ ಸಮರ್ಪಕವಾಗಲಿಲ್ಲ. ಇತರ ಅಳಿಯಂದಿರೂ, ಅವರ ಪರಿವಾರವೂ, ಕೆಲವರು ಕುದುರೆ, ಕೆಲವರು ಆನೆ, ಕೆಲವರು ರಥ ಮುಂತಾದ ಯಾನವಾಹನಗಳೊಡನೆ ತತ್ತದುಚಿತ ವೇಷಭೂಷಣಾದಿಗಳಿಂದ ರಾಜಮರಿಯಾದೆಗೆ ತಕ್ಕಂತೆ ಮಂದಿಯ ಮೆಚ್ಚುಗೆಗೆ ಸರಿಯಾಗಿ ಬಂದಿರುವರು. ಯಿತರ ಅಳಿಯಂದಿರ ಜತೆಯಲ್ಲಿ ಸ್ವರ್ಣವೇತ್ರಧಾರಿಗಳೂ, ರೂಪವಂತರೂ ಆದ ಶ್ರೇಷ್ಠತಮವಾದ ವೇಷಭೂಷಣಾದಿಗಳಿಂದೊಡಗೂಡಿದ ಕಿಂಕರರಿರುವರು. ಅವರವರ ವಂಶಾಚಾರಪ್ರತಿಷ್ಠೆಗಳನ್ನು ಹೊಗಳುತ್ತಿರುವರು. ನವೀನಜಾಮಾತ್ರನ ಜತೆಯಲ್ಲಿ ತ್ರಿಶೂಲಧಾರಿಗಳೂ, ವಾನರಮುಖಿಗಳೂ, ವಿಕೃತಾಕಾರಿಯಾದ ನಂದಿಯೂ ಇರುತ್ತ ಪ್ರತಿಯೊಬ್ಬರೂ ಯೆಂದೆಂದಿಗೂ ಅಡವಿಯಲ್ಲಿ ಸಂಚರಿಸುವ ಕಾಡುಜನರಹಾಗೆ ತಪಸ್ವಿಗಳ ಆಕಾರದಿಂದ ಭಸ್ಮತ್ರಿಪುಂಡ್ರಧಾರಿಗಳೂ, ನವೀನಜಾಮಾತ್ರನೊಂದಿಗಿರುವರು. ಈ ಪರಿವಾರದ ವಿಕಾರವನ್ನೂ, ಅದ್ಭುತಭಾವವನ್ನೂ ನೋಡುವ ರಾಜಕುಟುಂಬದವರೂ, ನಗರನಿವಾಸಿಗಳೂ, ಮಹಾರಾಜರಿಗಂತಹ ಬಾಧ್ಯತಾಲಕ್ಷ್ಯ ದೊರೆಯಿತು ? ಕಾಡುಜನರೆಲ್ಲರೂ ಹೀಗೆ ತಾನೇ ಇರುವರು; ಇದೊಂದು ಹೊಸತಲ್ಲ. ಅಳಿಯನ ಸದಾನಂದಮಯಭಾವವೂ, ಸರಳ ಮತ್ತು ಮಧುರವ್ಯವಹಾರವೂ, ಸದಾ ಪ್ರಸನ್ನಮುಖವೂ ನೋಡುವವರು ಬಹುಮಟ್ಟಿಗೆ ಯಿತರ ವಿಷಯಗಳಲ್ಲಿ ತಮ್ಮ ಮನಸನ್ನು ನುಗ್ಗಿಸದೆ ಸಂತೋಷಾಂತರಂಗಭರಿತರಾಗಿರುತ್ತಿದ್ದರು. ರಾಜಾರಾಣಿಯರ ಮತ್ತು ಪ್ರಜಾಕೋಟಿಯ, ವೈವಾಹಿಕಸಂಬಂಧ ವಿಚಾರಸರಣಿಯು ಈಪರಿಯಾಯ್ತು.

ಸತೀದೇವಿಯ ಭಾವವಿಂತಹುದೆಂದು ಬಣ್ಣಿಸಲು ಯಾರಿಗೆತಾನೇ ಸಾಧ್ಯವಾದೀತು ? ಸಾಧುಸನ್ಯಾಸಿಗಳಮೂಲಕ ಯಾವ ಮಹಾನುಭಾವನ ಗುಣಾತಿಶಯಗಳನ್ನು ಕೇಳಿ ತಿಳಿದು, ಆವಾತನನ್ನು ತನ್ನ ಯಿಷ್ಟದೈವನಂತೆ ಹೃದಯಕಮಲದಿಂದ ಅರ್ಚಿಸುತ್ತಿದ್ದಳೋ, ಅಂತಹ ಮಹಾದೇವನು ಈ ದಿನ ಪತಿರೂಪನಾಗಿ ಸತೀದೇವಿಯ ಸಮ್ಮುಖದಲ್ಲಿ ನಿಂತಿರುವನು. ಇಂತಹ ಸಮಯದಲ್ಲಿ ಸತೀದೇವಿಯ ಮನೋಭಾವವನ್ನು ವರ್ಣಿಸುವುದಕ್ಕೂ, ತಿಳಿಸುವುದಕ್ಕೂ ಉದ್ದಮುಷ್ಟಿಯಲ್ಲಿರುವ ಯಾವ ಭಾಷೆಗಳಲ್ಲಿ

ತಾನೇ ಶಬ್ದಜಾಲಗಳಿದ್ದೀತು ? ಯಂತಹ ಮಹಾಕವಿಯು ತಾನೇ ಶಕ್ತನಾದಾನು ? ನಾಲ್ಕು ಕಣ್ಣುಗಳೊಂದಾದಬಳಿಕ ತನ್ನನ್ನು ಸಂಪೂರ್ಣವಾಗಿ ಕೈಲಾಸಪತಿಯ ಚರಣಾರವಿಂದದಲ್ಲಿ ಸಮರ್ಪಿಸಿಕೊಂಡಳು.

ಆ ಚಾರುಚಂದ್ರನಿಂದಿತಮುಖವೂ, ಆ ರಜತಗಿರಿನಿಭದೇಹವೂ, ಆ ಪರಿಘಬೃಹದ್ಬಾಹುದ್ವಯವೂ, ಆ ಪ್ರಾಸಾದದ್ವಾರಸದೃಶ ವಿಶಾಲವಕ್ಷಸ್ಥಳವೂ, ಆಕೋಕನದನಿಂದಿತಚರಣವೂ, ಸತೀದೇವಿಯ ಧ್ಯಾನಕ್ಕೆ ಗುರಿಯಾಯಿತು. ಸತೀದೇವಿಯು ಪತಿಯನ್ನು ಕುರಿತು

"ಪ್ರಭುವೇ ! ಸತಿಗೆ ಪ್ರಭುವೇ ನೀನು ! ಸತಿಯ ಜನ್ಮವು ನಿನಗೋಸ್ಕರವಾಗಿಯೇ ! ಬ್ರಹ್ಮನಿಯಮವು ಕೂಡ ಯಿದೇ ! ಆದುದರಿಂದ ನಿನ್ನ ಸಹಧರ್ಮಿಣಿಯಾಗುವುದಕ್ಕೆ ಯೋಗ್ಯತೆಯುಳ್ಳೆಂದು ಭಾವಿಸು."

ಮದುವೆಯಾದಬಳಿಕ ಸತೀದೇವಿಯು ಕೈಲಾಸಪುರಿಯನ್ನು ಕುರಿತು ತೆರಳಿದಳು. ಸತೀದೇವಿಯ ಆಗಮನದಿಂದ ಕೈಲಾಸವು ಅಭಿನವಶ್ರೀಧಾರಣ ಮಾಡಿತು. ಹೂಗಳಲ್ಲಿ ಹೆಚ್ಚಾದ ಪರಿಮಳವೂ, ಹಕ್ಕಿಗಳ ಸಂಗೀತದಲ್ಲಿ ಅತ್ಯಂತ ಮಾಧುರ್ಯವೂ ಉಂಟಾದುವು. ಸನ್ಯಾಸಿಯಾಗಿದ್ದ ಕೈಲಾಸಪತಿಯು ಸತೀದೇವಿಯೊಡನೆ ಸಂಸಾರಿಯಾದನು. ಧರ್ಮ ಮತ್ತು ಕರ್ಮಗಳಲ್ಲಿಕೂಡ ಸತೀದೇವಿಯು ಪತಿಯ ಅರ್ಧಾಂಗಭಾಗವನ್ನು ಹೊಂದಿದಳು.

---

೨

ಹೀಗೆ ಕೆಲವುದಿನ ಕಳೆದಬಳಿಕ ಒಂದಾನೊಂದು ವಸಂತಾಗಮ ಸಮಯದಲ್ಲಿ ಕೈಲಾಸವು ಅಪೂರ್ವ ಶ್ರೀಧಾರಣವಾಯಿತು. ಬಿಡುವಿಲ್ಲದೆ ಹನಿಯುದುರುತಿರುವುದರಿಂದ ಕೈಲಾಸದ ತರುಸಂತಾನವು ಪತ್ರಪುಷ್ಪಗಳಿಲ್ಲದೆ ಶೋಭಾಶೂನ್ಯವಾಗಿದ್ದಿತು. ಆ ಸಮಯದಲ್ಲಿ ಋತುರಾಜನ ಐಂದ್ರಜಾಲಿಕ ಸ್ಪರ್ಶವು ಅವುಗಳ ಆಪಾದಮಸ್ತಕವೂ, ನವಕಿಸಲಯಗಳಿಂದ ಶೋಭಿಸುವಂತೆ ಮಾಡಿಬಿಟ್ಟಿತು. ಪರ್ವತರಾಜನು ಶುಭ್ರವಾದ ತುಷಾರವಸನವನ್ನು ತ್ಯಜಿಸಿ, ಶ್ಯಾಮಲ ಶೈವಾಲವಸನ ಪರಿಧಾನ ಮಾಡಿ, ಶ್ವೇತ, ಲೋಹಿತ, ಪಾಟಲ, ನಾನಾತರದ ಬಗೆಬಗೆಯ ಬಣ್ಣದ

ಗೊಂಚಲುಗೊಂಚಲುಗಳಾಗಿ ಅರಳಿರುವ ಹೂಗಳನ್ನು ಕಣ್ಣು, ವಕ್ಷಸ್ಥಳ, ಮತ್ತು ಪಾದದೇಶಗಳಲ್ಲಿ ಅಲಂಕಾರವುಳ್ಳವನಾಗಿ ಲೋಕಮೋಹಕನಾಗಿ ಮೆರೆಯುತಿರುವನು.

ತುಷಾರರಾಶಿಯು ನೂರಾರು ಕಾಲುವೆಗಳು ಝುರಝುರನಿನಾದದಿಂದ ವಿರಾಮಲೇಶವಿಲ್ಲದೆ ನಿಮ್ನಾಭಿಮುಖವಾಗಿ ಹರಿಯುತಿದೆ. ಚಳಿಗಂಜಿದ ಪ್ರಾಣಿಕೋಟಿಯು ಕೆಲವು ದಿನಗಳಮಟ್ಟಿಗೆ ಕೈಲಾಸವನ್ನು ಬಿಟ್ಟು ಉಷ್ಣಪ್ರದೇಶವನ್ನಾಶ್ರೈಸಿ ಹಿಂದಿರುಗಿಬರುತಿರುವುದರಿಂದ ಕೈಲಾಸವು ಪುನಃ ಸ್ವಸ್ವರೂಪವ ತಾಳಿತು. ಕೈಲಾಸದ ಉಪವನಸಮೂಹವು ಮರಳಿ ಮರಿದುಂಬಿಗಳ ಝೇಂಕಾರದಿಂದ ಮುಖರಿತವಾಗಿ, ಕೋಗಿಲೆ ಮುಂತಾದ ಪಕ್ಷಿಗಳ ಕಲರವಗಳಿಂದ ಮನೋಹರವಾಗಿದೆ. ಸ್ವಭಾವಭೀರುವಾದ ಕಸ್ತೂರೀಮೃಗವು ಸ್ವೇಚ್ಛಾವಿಹಾರವಮಾಡುತಿರುವುದು. ಚಮರೀಮೃಗವು ಪರ್ವತದ ಶಿಲಾಖಂಡದಮೇಲೆ ನಿಂತು, ನಾಸಾರಂಧ್ರಪ್ರಸಾರಣದ್ವಾರ ವಸಂತಾನಿಲಸುಖಸ್ಪರ್ಶವನ್ನು ಅನುಭವಿಸುತಿದೆ. ಋತುರಾಜನ ಆಗಮನದಿಂದ ಕೈಲಾಸದ ತರುಲತೆಗಳೆಲ್ಲವೂ, ಪಶುಪಕ್ಷಿಮೃಗಸಂಕುಲವೂ ಈಗ ನವೀನ ಸ್ಫೂರ್ತಿಯನ್ನೂ, ನವಜೀವನವನ್ನೂ ಧಾರಣೆಮಾಡಿವೆ.

ಕೈಲಾಸ ಪರ್ವತದಲ್ಲಿ ಏರುವುದಕ್ಕೆ ಅಸಾಧ್ಯವಾದ ಒಂದು ಶಿಖರದಮೇಲೆ ಕೈಲಾಸಪತಿಯ ಸ್ಫಟಿಕಶುಭ್ರಪ್ರಾಸಾದವಿದೆ. ದೊಡ್ಡದೊಡ್ಡ ದೇವದಾರು ವೃಕ್ಷಸಮೂಹವು ಮಂಡಲಾಕಾರವಾಗಿರುವುದರಿಂದ ಪ್ರಾಸಾದವು ಜನರಿಗೆ ಕಾಣದಂತಾಗಿಬಿಟ್ಟಿದೆ. ನಾಲ್ಕುಕಡೆಯೂ ಸ್ನಿಗ್ಧವೂ, ಪ್ರಶಾಂತವೂ, ರಮಣೀಯವೂ ಆಗಿದೆ. ತಪೋವನದ ಗಾಂಭೀರ್ಯದ ಜತೆಯಲ್ಲಿ ಉಪವನಸೌಂದರ್ಯ ಸಂಯೋಗವಾಗಿ ತಪಸ್ವಿಗೂ, ಗಾರ್ಹಸ್ಥ್ಯಸುಖಭೋಗಕ್ಕೂ ಉಪಯೋಗವಾಗಿದೆ. ಪ್ರಾಸಾದಕ್ಕೆ ಬಹು ಸಮೀಪದಲ್ಲೊಂದು ಪುರಾತನ ಉನ್ನತವಾದ ದೇವದಾರು ವೃಕ್ಷವು ವಿಶಾಲವಾದ ಶಾಖಾಪ್ರಶಾಖೆಗಳಿಂದ ನಿಂತಿದೆ. ಆ ಮಹಾವೃಕ್ಷದಕೆಳಗೆ ಸ್ವಭಾವನಿರ್ಮಿತವಾದ ಶಿಲಾಮಯವೇದಿಕೆಯೊಂದಿದೆ. ಸಾಯಂಕಾಲದಲ್ಲಿ ಅದರಮೇಲೆ ವ್ಯಾಘ್ರಚರ್ಮಾಸನಾಸೀನನಾಗಿ ಕೈಲಾಸಪತಿಯು ಪದ್ಮಾಸನದಿಂದ ಶೋಭಿಸುವನು. ಆತನ ಯಡಭಾಗದಲ್ಲಿ ಸತೀದೇವಿಯು. ಪ್ರೇಮಹಾಸೊಂದ-

ಪನಲತೆಯು, ಆ ದೇವದಾರು ವೃಕ್ಷವನ್ನಾಶ್ರಯಿಸಿರುವುದು. ಸಂಜೆಯ ಗಾಳಿಯಿಂದ ಅವುಗಳ ಸಣ್ಣ ಸಣ್ಣ ರೆಂಬೆಗಳಲ್ಲಾಡುತ ಆಗಿಂದಾಗ ಪ್ರೊಂದೆರಡು ಹೂಗಳು ದೇವದಂಪತಿಗಳ ತಲೆಯಮೇಲುದುರುತಿರುವುದು. ಈ ತರುಲತಾದ್ವಯವು ಭಕ್ತಿಭರದಿಂದ ದೇವದಂಪತಿಗಳನ್ನು ಪುಷ್ಪಾಂಜಲಿದಾನದಿಂದ ಅರ್ಚಿಸುತಿರುವುದು. ಕೈಲಾಸಪತಿಯು ಮಸ್ತಕದಲ್ಲಿ ಜಟಾಜೂಟವೂ, ಕಣ್ಠದಲ್ಲಿ ರುದ್ರಾಕ್ಷಮಾಲೆಯೂ, ಸರ್ವಾಂಗದಲ್ಲಿಯೂ ವಿಭೂತಿರಾಗವೂ, ಕಟಿಪ್ರದೇಶದಲ್ಲಿ ವ್ಯಾಘ್ರಚರ್ಮವೂ ಶೋಭಿಸುತಿರುವುವು. ಸತೀದೇವಿಯು ವೇಷಭೂಷಣಾದಿಗಳಲ್ಲಿ ಪತಿಯನ್ನೇ ಅನುಸರಿಸಿರುವಳು. ಆಕೆಯ ವೈನೋತೆ ಗೈರಿಕವಸನವು. ಕಣ್ಠದಲ್ಲಿ ರುದ್ರಾಕ್ಷದಾಮವು. ಕೈಗಳಲ್ಲಿ ರುದ್ರಾಕ್ಷವಲಯಗಳು, ಜೋಲಾಡುತಿರುವ ಕೇಶಭಾರವು, ಆಕೆಯ ಕಟಿಪೃಷ್ಠಗಳನ್ನಾವರಿಸಿ ಶಿಲಾತಲದಲ್ಲಿ ಹರಡಿರುವುದು. ಉಭಯರ ಸಮೀಪದಲ್ಲಿ ವಿಶಾಲವಾದ ತ್ರಿಶೂಲಧಾರಿಯಾಗಿ ನಂದಿಯು ನಿಂತಿರುವನು. ಅಸ್ತಗಾಮಿಯಾದ ಸೂರ್ಯನ ಕಿರಣಗಳು ದೇವದಂಪತಿಗಳ ಮೇಲೆ ಪ್ರಸರಿಸಿದಾಗ ಅವರು ಮತ್ತಷ್ಟು ಶೋಭಾಪೂರ್ಣರು. ನಂದಿಯು ರೆಪ್ಪೆಯಿಕ್ಕದೆ ಆನಂದೋತ್ಫುಲ್ಲದೃಷ್ಟಿಯಿಂದ ಆ ದೈವವಿಗ್ರಹಗಳನ್ನು ದರ್ಶಿಸುತಿರುವನು. ಪಿತೃಭಕ್ತಿಪರಿಪೂರಿತನಾದ ಪುತ್ರನು ಯಾವ ಭಾವದಿಂದ ತಾಯ್ತಂದೆಗಳನ್ನೂ, ಅನುರಾಗಪೂರ್ಣ ಪ್ರಜೆಗಳು ಯಾವ ಭಾವದಿಂದ ಇಷ್ಟದೇವ ದೇವಿಯರನ್ನು ನೋಡಿ, ಸೇವಿಸುತಿರುವರೋ, ನಂದಿಯು ಕೂಡ, ಆ ಭಾವನೆಗಳಿಂದ ದೇವದಂಪತಿಯರ ಸಂದರ್ಶನ ಮಾಡುತಿರುವನು.

ಕೈಲಾಸಪತಿಯು ಸತೀದೇವಿಯೊಡನೆ ಜೀವನ ಸುಖದುಃಖಸಂಬಂಧವಾಗಿ ಕಥೋಪಕಥನ ಮಾಡುತಿರುವನು. ಉಪವನದ ಪಶುಪಕ್ಷಿ ತರುಲತೆಗಳು ನಿಶ್ಶಬ್ದದಿಂದಲೂ, ಅತ್ತಿತ್ತ ಚಲಿಸದೆಯೂ, ಅವರ ಕಥೋಪಕಥನಗಳನ್ನು ಕೇಳುತ ನಿಂತಿರುವುವು. ಅವುಗಳ ವಾಮಭಾಗದಲ್ಲಿ ತನ್ನ ಕಿರಣಸಮೂಹದಿಂದ ಪರ್ವತಶಿಖರಗಳನ್ನು ಪ್ರಕಾಶಪಡಿಸುತ ದಿವಾಕರನು ಅಸ್ತಮಿತನಾಗುತಿರುವನು. ಕೈಲಾಸಪತಿಯು ಅದೆಸೆಗೆ ಅಂಗುಲಿಯನ್ನು ತೋರಿ, ಸತೀದೇವಿಯನ್ನು ಕುರಿತು:—

"ದೇವಿ! ಇತ್ತ ನೋಡು. ಈ ಸೂರ್ಯನು ಯೀ ಕ್ಷಣದವರೆಗೂ, ತನ್ನ ಪ್ರಕಾಶಮಾನವಾದ ಕಿರಣರಾಶಿಯಿಂದ ಪ್ರಪಂಚವನ್ನು ಬೆಳಗಿಸುತ್ತಿದ್ದನು. ಯಿಲ್ಲಿಂದ ಮುಂದೆ ಅದಕ್ಕೆ ಆ ಬಗೆಯ ತೇಜಸ್ಸೂ, ಆ ದೀಪ್ತಿಯೂ ಇಲ್ಲ. ಕ್ಷಣಾರ್ಧಮಾತ್ರದಲ್ಲಿಯೇ, ಆತನು ತೇಜೋಹೀನನಾಗಿ ಅದೃಶ್ಯನಾಗಿಬಿಡುವನು. ಪ್ರಪಂಚದಲ್ಲಿ ಮಾನವ ಜೀವನವೂ, ಯಿದರಂತೆಯೇ; ಈಗ ಯಾರಾದರೆ ಜ್ಞಾನದಿಂದಲೂ, ಗೌರವದಿಂದಲೂ ಪ್ರಖ್ಯಾತರೋ, ನಾಳೆ ಅಂತವರು ಯೆಲ್ಲೋ ಕತ್ತಲಲ್ಲಿ ಅದೃಶ್ಯವಾಗಿಬಿಡುವರು. ಹೇಗೂ, ಮಾನವನು ಭ್ರಾಂತಚಿತ್ತನಾಗಿ ನೀರಿನಮೇಲಣ ಗುಳ್ಳೆಯಂತಹ ಸುಖದುಃಖಗಳನ್ನು ಚಿರಸ್ಥಾಯಿಯೆಂದು ನಂಬಿರುವವನು.

ಸತೀದೇವಿ—ಸೂರ್ಯದೇವನು ಅಸ್ತಮಿಸಿ ಉದಯಿಸುವಂತೆಯೇ ಮಾನವನ ಜೀವನವುಕೂಡ? ಅದೇಕೆ?

ಕೈಲಾಸಪತಿ—ಆಶ್ಚರ್ಯವೇನು? ಸಾಧಾರಣ ಜನರು ಯಾವುದನ್ನು ಜನನ ಮತ್ತು ಮರಣವೆಂಬರೋ, ಜ್ಞಾನಿಗಳು ಅದನ್ನೇ ಉದಯಾಸ್ತಗಳೆಂಬರು. ಆದರೆ ದಿವಾಕರನ ದೈನಿಕ ಉದಯಾಸ್ತಗಳಲ್ಲಿಸಹ ಆತನ ತೇಜಸ್ಸು ಪರಿವರ್ತನವಾಗುವುದಿಲ್ಲ. ಮಾನವನ ಜೀವನವು ಹಾಗಲ್ಲ. ಪ್ರತಿಯೊಂದು ಹೊಸಜನ್ಮದ ಜತೆಯಲ್ಲೂ, ಮಾನವನು ಉತ್ತರೋತ್ತರ ಜ್ಞಾನ ಸಂಪಾದನೆಮಾಡಿ, ಉನ್ನತಿಕೆಯಿಂದ ಅತ್ಯುನ್ನತಿಕೆಯನ್ನು ಹೊಂದುವನು. ಯಾವಾತನಾದರೆ ಕೇವಲ ಧರ್ಮಹೀನನೋ, ಆತನು ದಿನೇದಿನೇ ಅಧೋಗತಿಗೂ ಅಧೋಗತಿಯನ್ನು ಹೊಂದುವನು.

ಸತೀದೇವಿ—ಧರ್ಮಹೀನ ಜೀವನದಲ್ಲಿ ಗತಿಯಿಲ್ಲವೇನು? ಅಂತವರು ಬಹುಕಾಲ ಅಧೋಗತಿಯಲ್ಲಿರತಕ್ಕದ್ದೇನು?

ಕೈಲಾಸಪತಿ—ಅಲ್ಲ, ದೇವಿ! ಹಾಗಲ್ಲ. ಜೀವೇಶ್ವರರಲ್ಲಿ ಪಾರ್ಥಕ್ಯವಿಲ್ಲ. ಕರ್ಮಗುಣದಿಂದ ಪಾಪದ ಪ್ರಾಯಶ್ಚಿತ್ತವಾಗಿ, ಅಭ್ಯುನ್ನತಿಕೆ ಮತ್ತು ಶಿವತ್ವಪ್ರಾಪ್ತಿಯು; ಇದೀಗ ಪ್ರಕೃತಿನಿಯಮವು.

ದೇವದಂಪತಿಗಳು ಹೀಗೆ ಆನಂದಮಯವಾಗಿ ವಾದಾನುವಾದ ಮಾಡುತ್ತಿರುವ ಸಮಯದಲ್ಲಿ ಯಿಂಪಾದ ಝೇಂಕಾರವು ಕೇಳಿಸಿತು. ಒಡನೆ ಇಬ್ಬರೂ ಆ ರವವನ್ನು ಕೇಳುತ್ತ ನೋಡುತ್ತಿದ್ದರು. ಮಹಾತೇಜಸ್ವಿಯಾದ

ತಪಸ್ವಿಯೊಬ್ಬಾತನು ರಾಗಸ್ವರಲಯಾದಿಗಳೊಡನೆ ಕೈಲಾಸ ಮತ್ತು ದೇವ ದಂಪತಿಗಳನ್ನು ಕೊಂಡಾಡುತಬಂದನು.

ನಾರದಮಹರ್ಷಿಯ ವೀಣಾಧ್ವನಿಯು ಸತೀದೇವಿಗೆ ಆಜನ್ಮಪರಿಚಿತ ವಾದುದು. ಕೇಳಿದಮಟ್ಟಿಗೆ ಆಕೆಯ ಶರೀರವು ಪುಲಕಾಂಕುರವಾಗಿಬಿಟ್ಟಿತು. ಆಕೆಯು ಹರ್ಷದಿಂದಲೂ, ಗದ್ಗದಕಂಠದಿಂದಲೂ, ಕೈಲಾಸಪತಿಯನ್ನು ಕುರಿತು:—"ಮಹಾಪ್ರಭುವೇ ! ಈ ಧ್ವನಿಯು ಮತ್ತಾರದೂ ಅಲ್ಲ. ದೇವರ್ಷಿಯಾದ ನಾರದರು ಶುಭಾಗಮನ ಮಾಡುತಿರುವರು."

ಆ ಕ್ಷಣವೇ ಕೇವಲ ಶುಭ್ರತೆಯಿಂದಲೂ, ನಗೆಮೊಗದಿಂದಲೂ, ದಶ ದಿಕ್ಕುಗಳನ್ನೂ ಪ್ರಕಾಶಪಡಿಸುತ್ತಿರುವ ದಿವ್ಯಮೂರ್ತಿಯಾದ ನಾರದಮಹಾ ಮುನಿಯು ಆ ದೇವದಂಪತಿಗಳ ಸಮ್ಮುಖವನ್ನು ಸೇರಿದನು. ಪರಸ್ಪರ ಯಥಾಯೋಗ್ಯವಾದ ಅಭಿವಾದನ ಅಭ್ಯರ್ಥನಗಳಾದಬಳಿಕ ದೇವರ್ಷಿಯು ಸಮೀಪದಲ್ಲಿರುವ ಸ್ಫಟಿಕಶಿಲಾಮಯಪೀಠದಲ್ಲಿ ಆಸೀನನಾದನು. ಸತೀದೇವಿಯು ನಾರದಮಹರ್ಷಿಯನ್ನು ಕುರಿತು

"ಮಹರ್ಷಿಗಳೇ! ಕನಖಲನಗರದ ವೃತ್ತಾಂತವೇನು? ತಂದೆಯೂ, ತಾಯಿಯೂ, ಇತರರೂ ಕ್ಷೇಮದಿಂದಿರುವರಲ್ಲವೇ ?"

ನಾರದ—ಶ್ಲಾಘ್ಯತಮವಾದ ಪ್ರಶ್ನೆಯು. ನಿಮ್ಮ ತಾಯ್ತಂದೆಗಳೂ ಸೋದರ ಸೋದರಿಯರೂ ಕ್ಷೇಮದಿಂದಿರುವರು.

ಸತೀದೇವಿ—"ತಂದೆಯು ಯಾವರೆಗೂ ನಮ್ಮ ಕುಶಲವನ್ನು ವಿಚಾರಿಸಲಿಲ್ಲವೇಕೆ ?"

ನಾರದ—ನಿಮ್ಮ ತಂದೆಯು ಪ್ರೊಂದುಬಗೆಯ ಮಹಾಯಜ್ಞವನ್ನು ಕುರಿತ ಕಾರ್ಯಕಲಾಪದಲ್ಲಿರುವನು. ಭೂಲೋಕದಲ್ಲಿ ಸಿರಿವಂತರೂ, ಪಂಡಿತನೂ, ಮೂರ್ಖನೂ ಮುಂತಾದ ಯಿತರ ಪ್ರಜಾಕೋಟಿಯೆಲ್ಲವನ್ನೂ ಆ ಯಜ್ಞಕ್ಕೆ ಆಹ್ವಾನಮಾಡುವನು. ಈ ಮಹಾಕ್ರತು ಸಮಾರಂಭದ ಗದ್ದಲದಲ್ಲಿ ನಿಮ್ಮ ವಿಚಾರವನ್ನು ಮಾಡಲು ವಿರಾಮ ದೊರೆಯದಿರಬಹುದೆಂದು ತೋರುತಿದೆ."

ಸತೀದೇವಿಯು ಕೇವಲ ಸಂತೋಷದಿಂದ—"ದೇವರ್ಷಿಗಳೇ !

ತಂದೆಯು ಅಪೇಕ್ಷೆಯಂತೆ ಆ ಮಹಾಯಜ್ಞಕ್ಕೆ ನಮ್ಮನ್ನು ಯಾಗಶಾಲೆಗೆ ಕರೆದೊಯ್ಯಲು ಯಿಲ್ಲಿಗೆ ಚಿತ್ತೈಸಿರುವಿರೇನೊ ?''

ನಾರದ—ಇಲ್ಲ ; ತಾಯೇ ! ಇಲ್ಲ ; ನಾನಿಲ್ಲಿಗ ಬರುವೆನೆಂದು ನಿಮ್ಮ ತಾಯ್ತಂದೆಗಳು ಯಾವಬಗೆಯಿಂದಲೂ ಕಾಣರು. ನಾನು ಮಾರ್ಗವಶ ದಿಂದ ಯಿಲ್ಲಿಗೆ ಬಂದೆನು. ಬಹುದಿನಗಳಿಂದ ನಿಮ್ಮ ಸಂದರ್ಶನವಿಲ್ಲದುದ ರಿಂದ ನಿಮ್ಮನ್ನು ನೋಡಬೇಕೆಂಬಾಶಯದಿಂದ ನಾನಾಗಿ ಯಿಲ್ಲಿಗೆ ಬಂ ದೆನು.

ಸತೀದೇವಿ—''ತಂದೆಯು ಯಿಂತಹ ಮಹಾಕ್ರತುವನ್ನು ಮಾಡು ವಾಗ ದೇಶದೇಶಾನ್ತರದವರೆಲ್ಲರಿಗೂ ನಿಮನ್ತ್ರಣ ಮಾಡುತಿರುವನು. ಅಂ ತಲ್ಲಿ ನಮಗೆ ಆಹ್ವಾನಮಾಡದೆಯೂ, ವರ್ತಮಾನವಾದರೂ ಕೊಡದೆಯೂ ಇರಲು ಕಾರಣವೇನು ?''

ನಾರದ—ಈ ಪ್ರಶ್ನೆಗೆನಾನು ಹೇಗೆತಾನೇ ಉತ್ತರ ಕೊಡಲಿತಾಯೆ? ನಿಮ್ಮ ತಂದೆಗೆ ಚಿತ್ತಸ್ಥೈರ್ಯವಾಗಿರಬಹುದು. ಈ ಯಜ್ಞಸಮಾರಂಭಕ್ಕೆ ನಿಮ್ಮಗಳನ್ನು ಕರೆಯುವುದಿಲ್ಲೆಂದು ಕೇಳಿದೆನು.''

ಸತೀದೇವಿಯು ವಿಸ್ಮಿತೆಯಾದಳು. ಆಕೆಯು ಗದ್ಗದಸ್ವರದಿಂದ ''ಹೇ ತಪೋಧನ ! ನಾವು ಮಾಡಿದ ಅಪರಾಧವೇನು ?''

ನಾರದ—ಕೈಲಾಸಪತಿಯಾದ ಶಂಕರನ ನಡತೆಯಿಂದ ತನಗೆ ಅಪ ಮಾನವಾಯಿತೆಂದಾತನೆಣಿಸಿದಂತೆ ನಾನು ಕೇಳಿದೆನು. ಅದರ ಪ್ರತೀಕಾರ ವಾಗಿ ಆತನು ತನ್ನ ಕುಟುಂಬದ ಬಾಂಧವರೆಲ್ಲವನ್ನೂ ಕರೆದು ನಿಮ್ಮ ಮಟ್ಟಿಗೆ ಕರೆಯದೆಹೋಗಬೇಕೆಂಬ ಉದ್ದೇಶವಂತೆ.''

ಸತೀದೇವಿ—ತಾಯಿಗೆ ಈ ಸಮಾಚಾರ ಗೊತ್ತಿಲ್ಲವೇನು ?

ನಾರದ—ಗೊತ್ತುಂಟು. ಆದರೇನು ? ಆಕೆಯು ಬಹು ಪ್ರಯ ತ್ನಪಟ್ಟಿದ್ದಾದರೂ ಪ್ರಜಾಪತಿಯು ಆಕೆಯ ಪ್ರಾರ್ಥನೆಯನ್ನು ಯಾವ ಭಾಗ ದಲ್ಲೂ ಅಂಗೀಕರಿಸಲಿಲ್ಲ. ಯಿದರಿಂದ ರಾಜಮಹಿಷಿಯು ಅನ್ನಪಾನಾದಿಗ ಳನ್ನು ತೊರೆದು ಸಂತಾಪಪಡುತಿರುವಳು. ಆದರೂ ತಾಯೇ ! ಇನ್ನು ಯಿಾ ಪ್ರಸಂಗದಿಂದ ಸ್ವಲ್ಪಮಟ್ಟಿಗೂ ಉಪಯೋಗವಿಲ್ಲ. ನಮಗೆ ಬೇರೆ ಕೆಲಸವುಂಟು. ನಾನು ಹೋಗುತ್ತೇನೆ.

ಈ ಮಾತುಗಳನ್ನು ಹೇಳಿ ನಾರದನು ದೇವದಂಪತಿಯರ ಅನುಜ್ಞೆಯನ್ನು ಪಡೆದು ತೆರಳಿದನು. ನಂತರ ಸತೀದೇವಿಯು ವಿಸ್ಮಿತಳಾಗಿ ಕೈಲಾಸಪತಿಯೊಡನೆ—

"ಹೇ ಮಹಾಪ್ರಭೋ! ತಂದೆಯು ತಮ್ಮ ವ್ಯವಹಾರದಲ್ಲಿ ಅಪಮಾನಿತನಾದಂತೆ ಯೋಚಿಸಿರುವುದಕ್ಕೆ ಕಾರಣವೇನು?"

ಕೈಲಾಸಪತಿ—"ದೇವಿ! ನಾನು ಆತನಿಗೆ ಅಪಮಾನ ಮಾಡಲಿಲ್ಲ. ಯಾರಿಗಾದರೂ ಅಪಮಾನಪಡಿಸುವುದು ನನ್ನ ಪ್ರಕೃತಿಯಲ್ಲ. ಆದರೆ ಕೆಲವು ದಿನಗಳಹಿಂದೆ ಒಂದಾನೊಂದು ಸಮಯದಲ್ಲಿ ದೇವಸಭೆಯಿಂದ ಬಂದ ನಿಮಂತ್ರಣದಂತೆ ದೇವಗಣದ ಜತೆಯಲ್ಲಿ ನಾನೂ ಇದ್ದೆನು. ದಕ್ಷಪ್ರಜಾಪತಿಯು ಸಭೆಗೆ ಬಂದನು. ಆ ಕಾಲದಲ್ಲಿ ಇತರರು ಆತನಿಗೆ ಮರಿಯಾದೆ ಮಾಡಿದಂತೆ ನಾನು ಮಾಡಲಿಲ್ಲ. ಅದುಮೊದಲು ನನ್ನಲ್ಲಿ ದ್ವೇಷಬುದ್ಧಿಯಿಂದ ನನಗೆ ಅಪಮಾನ ಮಾಡಬೇಕೆಂದು ನಿಶ್ಚೈಸಿ, ಯಾವುದೊಂದು ಉಪಾಯವನ್ನು ಹುಡುಕುತ್ತಿರುವನು. ಈ ಸಂಗತಿಯು ನಿನಗೆ ತಿಳಿದರೆ, ವ್ಯಥೆಯಾಗುವದೆಂದು ನಿನ್ನೊಡನೆ ಹೇಳಲಿಲ್ಲ."

ಸತೀದೇವಿ—ಪ್ರಭುವೇ! ನನ್ನದೊಂದೇ ಒಂದು ಪ್ರಾರ್ಥನೆಯು. ತಮ್ಮ ಅನುಜ್ಞೆಯನ್ನು ಪಡೆದು ಒಂದುಸಲ ಕನಖಲ ನಗರವನ್ನು ಕುರಿತು ತಂದೆಗೆ ಸಮಸ್ತ ಸಂಗತಿಯನ್ನೂ ತಿಳಿಸಿ ಬರುವೆನು.

ಕೈಲಾಸಪತಿ—ದೇವಿ! ಬೇರೆ ಯಾವ ಕಾಲದಲ್ಲಾದರೂ ಹೋದರೆ ಯಾವ ತೊಂದರೆಯೂ ಆಗದು. ಈಗ ನೀನು ಹೋದುದಾದರೆ ಅಸೂಯೆಯಿಂದ ನಿನಗೆ ಆತನು ಅಪಮಾನಪಡಿಸುವನು.

ಸತೀದೇವಿ—ನನಗೆ ಅಪಮಾನಪಡಿಸುವುದಕ್ಕೆ ಕಾರಣವೇನು? ನಾನಾದರೆ ಆತನಬಳಿ ಯಾವ ಅಪರಾಧವೂ ಮಾಡಿಲ್ಲವಷ್ಟೆ?

ಕೈಲಾಸಪತಿ—ಸತಿ! ನೀನು ಸ್ವಭಾವವಾಗಿ ಸರಳಹೃದಯೆ. ನೀನು ನಿನ್ನ ತಂದೆಯ ವಿಶ್ವಾಸಕ್ಕೆ ಪಾತ್ರಳಲ್ಲ. ಸ್ವಪ್ರತಿಷ್ಠೆಯ ಪ್ರಾಬಲ್ಯಕ್ಕಿಂತಲೂ ಬೇರೆ ಅಸಂಗತವಾವುದೂ ಇಲ್ಲ. ಅಂತಹವನು ಯಾವ ಕೆಲಸಕ್ಕೂ ತಾನೇ ಹಿಂದೆಗೆಯುವನು? ನಾನು ಆತನಿಗೆ ಅಪಮಾನವಮಾಡಿದೆನು, ಆದುದರಿಂದ ನನಗೆ ಆತನು ಅವಮರಿಯಾದೆಮಾಡುತ್ತಿರಬೇಕು. ನಾನಿಲ್ಲದಿರುವಾಗ

ನಿನಗಾದರೂ ಮಾನಭಂಗಮಾಡುವುದಕ್ಕೆ ಆತನು ಹಿಂಜರೆಯುವಹಾಗಿಲ್ಲ. ಈ ಅಂಶದಲ್ಲಿ ನಮಗೆ ಅಗೌರವಗೊಳಿಸುವುದಕ್ಕಾಗಿಯೆ ಆತನು ಈ ಯಜ್ಞವನ್ನು ಆರಂಭಿಸಿರುವನು. ಆದುದರಿಂದ ಆಹ್ವಾನವಿಲ್ಲದೆ ಈ ಯಜ್ಞಕ್ಕೆ ನೀನು ಹೋಗುವುದು ತಕ್ಕದ್ದೋ ಅಲ್ಲವೋ ನೀನೇ ಯೋಚಿಸು.

ಸತೀದೇವಿ—ಪ್ರಭುವೇ ! ನಾನು ತಮಗೇನೆಂದು ಅರಿಕೆಮಾಡಲಿ ? ಮಗಳು ತಂದೆಯಮನೆಗೆ ಹೋಗುವುದಕ್ಕೆ ಆಹ್ವಾನವೇಕೇಕೆ ? ಅದರಲ್ಲೂ ದೇವರ್ಷಿನಾರದರ ಮುಖವಚನದಿಂದ ತಾಯಿಯು ನನಗೋಸ್ಕರ ಅನ್ನಪಾನೀಯಾದಿಗಳನ್ನು ತೊರೆದು ಶೋಕಗ್ರಸ್ತಳಾಗಿರುವಳೆಂಬುದನ್ನು ತಿಳಿದು ತಿಳಿದೂ, ಅಪಮಾನಭಯದಿಂದ ಸಮೀಪಕ್ಕೆ ಹೋಗದೆಯಿರುವುದು ನನ್ನ ಕರ್ತವ್ಯವಾದೀತೇ ?

ಕೈಲಾಸಪತಿ—"ದೇವಿ ! ಈ ಮಾತಿಗೆ ಮುಂದೆ ಪ್ರತ್ಯುತ್ತರಬಾರದು. ನಿನ್ನ ಯಿಚ್ಛೆ ಬಂದಂತೆ ಮಾಡಬಹುದು. ಅವಸ್ಥೆಯನ್ನು ತಿಳಿದು ಕೆಲಸಮಾಡತಕ್ಕದು. ಆದರೂ ನನಗೇನೋ, ಈ ಯಜ್ಞದ ಪರಿಣಾಮವು ನಿನ್ನ ನನ್ನ ಮತ್ತು ದಕ್ಷಪ್ರಜಾಪತಿಯಪಕ್ಷವಾಗಿ ಶ್ರೇಯಸ್ಸುಂಟಾಗಲಾರದೆಂದು ನಂಬುಗೆಯಿರುವುದು."

ಸಮಯೋಚಿತವಾಗಿ ನನ್ದಿಯು ಸತೀದೇವಿಯನ್ನು ಕನಖಲನಗರಕ್ಕೆ ಕರೆದುಕೊಂಡು ಹೊರಡಲು ಸಿದ್ಧವಾದನು. ಸತೀದೇವಿಯು ತಂದೆಯಮನೆಗೆ ಹೋಗುವುದಕ್ಕೆ ತನ್ನ ವೇಷಭೂಷಣಗಳನ್ನು ಬದಲಾಯಿಸಲಿಲ್ಲ; ಕೈಲಾಸದಲ್ಲಿರುವಾಗ ಯಾವಬಗೆಯ ತಪಸ್ವಿನಿಯ ವೇಷದಿಂದಿರುವಳೋ, ಅದೇ ಅಲಂಕಾರದಿಂದಲೇ ಕನಖಲ ನಗರವನ್ನು ಸೇರಿದಳು. ಆಕೆಯ ಕಂಠದಲ್ಲಿ ಸ್ಫಟಿಕಮಣಿಮಾಲೆ, ಕರಗಳಲ್ಲಿ ರುದ್ರಾಕ್ಷಿ ಕಂಕಣ, ಸರ್ವಾಂಗದಲ್ಲಿಯೂ ವಿಭೂತಿರಾಗ, ಲಲಾಟದಲ್ಲಿ ಭಸ್ಮತ್ರಿಪುಂಡ್ರ, ಕೇಶದಾಮವು ಆಗುಲ್ಫಲಂಬಿತವು, ಅವೇಣೀಬದ್ಧವು, ಗೈರಿಕವಸನ ಪರಿಧಾನವು, ಈತೆರನ ಅಲಂಕಾರಭೂಷಿತೆಯಾಗಿ ಸಾಕ್ಷಾತ್ ಪವಿತ್ರತೆಯು ಕನಖಲನಗರಮಧ್ಯದಲ್ಲಿ ಸನ್ದಿವಾಸನಾರೂಪೆಯಾಗಿ, ತಂದೆಯ ಅರಮನೆಯನ್ನು ಕುರಿತು ಹೋಗುತ್ತಿರುವಳು. ಕನಖಲ ನಗರನಿವಾಸಿಗಳಲ್ಲಿ ಸತೀದೇವಿಯನ್ನು ಬಾಲ್ಯದಲ್ಲಿ ಕಂಡಿದ್ದವರು ಆಕೆಯ ಅಲಂಕಾರವನ್ನೂ ತೇಜಸ್ಸನ್ನೂ

ನೋಡಿ ವಿಸ್ಮಯದಿಂದ ಪ್ರತಿಯೊಬ್ಬರೂ ಭೂನತರಾಗಿ ಸಾಷ್ಟಾಂಗನಮಸ್ಕಾರ ಮಾಡುತಿರುವರು. ಸತೀದೇವಿಯು ಮೌನಮುದ್ರೆಯಿಂದ ರಾಜಪ್ರಾಸಾದದ ವೊಂದು ಕಕ್ಷೆಯಲ್ಲಿ ಧೂಳಿಯಿಂದ ತುಂಬಿದ ಮೈಯುಳ್ಳವಳಾಗಿ ರೋದಿಸುತಿರುವ ತಾಯಿಯ ಸಮೀಪವನ್ನು ಸೇರಿ, ಕೇವಲ ಮಧುರಸ್ವರದಿಂದ "ತಾಯೇ ! ನಾನು ಬಂದಿರುವೆನು" ಯೆಂದಳು.

ಸಜೀವನ ಮಂತ್ರದಂತೆ ಆ ಧ್ವನಿಯು ರಾಜಮಹಿಷಿಯ ಕಿವಿಗೆ ಬೀಳುತಲೇ ಆಕೆಯು ಚಮಕಿತಳಾಗಿ ಮೇಲಕ್ಕೆದ್ದು ಸತೀದೇವಿಯನ್ನು ನೋಡಿದಕೂಡಲೆ ಆಕೆಯನ್ನು ಆಲಿಂಗನ ಮಾಡಿಕೊಂಡು "ತಾಯೇ ! ನನ್ನಬಳಿಗೆ ಬಂದೆಯಾ ?" "ತಾಯೇ ! ನನ್ನಬಳಿಗೆ ಬಂದೆಯಾ ?" ಯೆಂದು ಹೇಳುತ ಬೇಗಬೇಗ ಸತೀದೇವಿಯ ಮುಖಚುಂಬನ ಮಾಡತೊಡಗಿದಳು. ಆ ಇಬ್ಬರ ಕಣ್ಣೀರಿಂದ ಯಿಬ್ಬರ ವಕ್ಷಸ್ಥಳ ಸ್ಕಂಧದೇಶಗಳು ತೋಯ್ದು ಬಿಟ್ಟುವು.

ಸತೀದೇವಿಯು ತಾಯನ್ನು ನೋಡಿ—

"ತಾಯೇ ! ನಾನೊಂದುಬಾರಿ ತಂದೆಯನ್ನು ನೋಡಿಬರುವೆನು" ಅಂದಳು.

ರಾಜಮಹಿಷಿ—"ಬೇಡ ತಾಯೇ ! ಅರಸನು ಯಾಗಶಾಲೆಯಲ್ಲಿರುವನು. ಯೀಗ ಅಲ್ಲಿಗೆ ಹೋಗಲು ಕಾರಣವಿಲ್ಲ."

ಸತೀದೇವಿ—"ತಾಯೇ ! ನಾನು ತಂದೆಯನ್ನು ಬಹು ದಿನಗಳಿಂದ ನೋಡಿಲ್ಲ. ವೊಂದುಬಾರಿ ಆತನನ್ನು ನೋಡಿಬರುವೆನು."

ಹೀಗೆ ಹೇಳಿ ರಾಜಮಹಿಷಿಯ ಪ್ರತ್ಯುತ್ತರ ಬರುವುದಕ್ಕೆ ವೊದಲೆ ಸತೀದೇವಿಯು ಅವಸರವಸರವಾಗಿ ಯಾಗಶಾಲೆಯನ್ನು ಕುರಿತು ತೆರಳಿದಳು.

ರಾಜಪ್ರಾಸಾದಕ್ಕೆ ಸಮೀಪದಲ್ಲಿರುವ ವಿಸ್ತಾರವಾದ ಪ್ರದೇಶದಲ್ಲಿ ಯಾಗಶಾಲೆಯು ಅಣಿಯಾಗಿದ್ದಿತು. ದೇಶದೇಶಾಂತರಗಳಿಂದ ಸಾಧುಸನ್ನ್ಯಾಸಿಗಳೂ ವೇದವೇದಾಂಗಗಳನ್ನರಿತ ಪಂಡಿತಸಂತತಿಯೂ, ಮಹಾತಪಸ್ಸಂಪನ್ನರಾದ ಯೋಗಿಗಳೂ, ಪ್ರೇಕ್ಷಕಗಣವೂ ಯಾಗಶಾಲೆಯಲ್ಲಿ ತುಂಬಿದ್ದಿತು.

ದಕ್ಷಪ್ರಜಾಪತಿಯ ಅಷ್ಟೈಶ್ವರ್ಯಕ್ಕೆ ಮಿತಿಯಿಲ್ಲ. ಯಜ್ಞೋಪಕರಣಗಳೂ, ತತ್ಸಮಾರಂಭವೂ ವರ್ಣನಾತೀತವು. ಮೇಲ್ಭಾಗದಲ್ಲಿ ಕಾಶೀಯವಸನನಿರ್ಮಿತವಾದ ಚಂದ್ರಾತಪವೂ, ಕೆಳಭಾಗದಲ್ಲಿ ಯಜ್ಞವೇದಿಕೆಯೂ, ಯಜ್ಞಕುಂಡದ ಮೇಲ್ಭಾಗದಲ್ಲಿ ಮಂಡಲಾಕಾರವಾಗಿ ಕುಳಿತಿರುವ ಋತ್ವಿಗ್ಗಣವು. ನಟ್ಟನಡುವೆ ದಕ್ಷಪ್ರಜಾಪತಿಯು. ಪವಿತ್ರವಾದ ಹೋಮಧೂಮವು ದೆಸೆದೆಸೆಯಲ್ಲಿಯೂ ಪ್ರಸರವಾಗುತಿದೆ. ಅವಿರತ ಆಹುತಿದಾನದಿಂದ ಅಗ್ನಿಜ್ವಾಲೆಯು ಹೆಚ್ಚಿ, ದಕ್ಷಪ್ರಜಾಪತಿಯ ಮುಖವು ಕೆಂಬಣ್ಣವಾಗಿ, ಆತನು ಮೂರ್ತೀಭವಿಸಿದ ಅಗ್ನಿಯಂತೆ ಕಾಣುತಿರುವನು. ಸತೀದೇವಿಯ ಆಗಮನವನ್ನು ನೋಡಿ ನೆರೆದಿರುವ ಸಭಿಕರು ಸಂಭ್ರಮಾನ್ವಿತರಾಗಿ, ದಾರಿ ಬಿಟ್ಟುಕೊಡುತಿದ್ದರು. ಸತೀದೇವಿಯು ತಂದೆಯ ಸಮೀಪವನ್ನೈದಿ ಸಾಷ್ಟಾಂಗನಮಸ್ಕಾರವನ್ನು ಮಾಡಿದಳು. ಆ ಸಮಯದಲ್ಲಿ ಋತ್ವಿಕ್ಕುಗಳ ಕಂಠದಿಂದ ಹೊರಬೀಳುವ ವೇದಮಂತ್ರವು ನೀರವವಾಗಿಬಿಟ್ಟಿತು. ಹೋತೃವಿನ ಆಹುತಿಪ್ರದಾನಹಸ್ತವು ಚಲಿಸದಂತಾಗಿಬಿಟ್ಟಿತು. ದಕ್ಷನು ಯಿದಕ್ಕೇನು ಕಾರಣವೆಂದು ಸುತ್ತಲೂ ದೃಷ್ಟಿಪ್ರಸರಣಮಾಡಿದನು. ಸತೀದೇವಿಯು ಅಂಜಲಿಬದ್ಧಳಾಗಿ ಯಜ್ಞವೇದಿಕೆಯ ಬಳಿ ನಿಂತಿರುವಳು. ಸತೀದೇವಿಯನ್ನು ನೋಡಿದಮಾತ್ರದಲ್ಲಿ ದಕ್ಷನ ಮುಖವು ಪ್ರಸನ್ನವಾಯಿತು. ಆತನು ವಾತ್ಸಲ್ಯಪೂರಿತನಾಗಿ ಗದ್ಗದಸ್ವರದಿಂದ "ಸತೀ! ತಾಯಿ! ನನ್ನಬಳಿಗೆ ಬಂದೆಯಾ?" ಅಂದನು.

ಹೀಗೆಂದ ಉತ್ತರಕ್ಷಣಕ್ಕೇನೆ ಆತನ ಭಾವವು ಬೇರೊಂದುಬಗೆಗೆ ಮಾರ್ಪಾಗಿಬಿಟ್ಟಿತು. ಆತನ ಹಣೆಯೊಳಗಿನ ರಕ್ತನಾಳಗಳು ನೀಲವರ್ಣಕ್ಕೆ ತಿರುಗಿದುವು. ಮುಖಮಂಡಲವು ಅಸ್ತಮಯಸಮಯದ ಸೂರ್ಯನಂತೆ ಲೋಹಿತವರ್ಣಮಯವಾಗಿಬಿಟ್ಟಿತು. ಆತನು ಕೇವಲ ಕರ್ಕಶಧ್ವನಿಯಿಂದ—

ಸತಿ! ನೀನಿಲ್ಲಿ ಯೇತಕೆ ಬರಬೇಕು? ಯಿಲ್ಲಿಗೆ ನಿನ್ನನ್ಯಾರು ಬರಹೇಳಿದವರು?" ಯೆಂದನು.

ವಿಷಮಯವಾದ ಶರಾಹತಿಯಂತೆ, ತಂದೆಯ ಆ ಕಠೋರವಾಕ್ಯವು ಸತೀದೇವಿಯ ಮರ್ಮದೇಶವನ್ನು ಭೇದಿಸಿಬಿಟ್ಟಿತು. ಆಕೆಯು ಹುಟ್ಟಿ

ಬುದು ವೊದಲು ಯಿಾಕ್ಷಣವವರೆಗೂ, ಯಿಾತೆರನ ಕರ್ಕಶವಾಕ್ಯವನ್ನು ತಂದೆ ಯುಮ್ಮುಖದಿಂದ ಕೇಳಿದವಳಲ್ಲ. ಕಣ್ಣಿಂದ ಸುರಿಯುತಿರುವ ಅಶ್ರುಧಾರೆ ಯನ್ನು ಕೈಯಿಂದೊರೆಸಿಕೊಳುತ —

"ತಂದೆಯವರೇ ! ನಾನು ಬಹುದಿನಗಳಿಂದ ನಿಮ್ಮನ್ನು ನೋಡಿರಲಿ ಲ್ಲವಾದುದರಿಂದ ನಿಮ್ಮನ್ನು ನೋಡಬಂದೆನು" ಅಂದಳು.

ಸತೀದೇವಿಯ ಆ ಕರುಣಾರಸಭರಿತವಾದ ಪ್ರತ್ಯುತ್ತರವು ಸಭೆಯೊ ಳಗಿನ ಸಮಸ್ತರ ಹೃದಯವನ್ನೂ ನೀರಾಗಿ ಕರಗಿಸಿಬಿಟ್ಟಿತು. ಆದರೂ ದಕ್ಷಪ್ರಜಾಪತಿಯು ಮೊದಲಿನಂತೆಯೇ ಕ್ರೂರಧ್ವನಿಯಿಂದ —

"ಸತೀ ! ನಿನ್ನನ್ಯಾರು ಯಿಾಯಜ್ಞಕ್ಕೆ ಬರಹೇಳಿ ಕರೆದವರು? ನಾನಂತೂ ನಿನ್ನನ್ನು ಕರೆದವನಲ್ಲವಷ್ಟೆ?"

ಸತೀದೇವಿ—ಪಿತನೇ ! ತಾಯ್ತಂದೆಗಳನ್ನು ನೋಡಹೋಗಲು, ಸಂತಾನಕ್ಕೆ, ಆಹ್ವಾನದ ಅವಶ್ಯಕ ವುಂಟೇನು ? ನಾನು ಆಹ್ವಾನವಿಲ್ಲದೆಯೆ ಬಂದೆನು."

ದಕ್ಷಪ್ರಜಾಪತಿ—ಈವಾತು ದಕ್ಷಪ್ರಜಾಪತಿಯ ಮಗಳಿಗೆ ಉಪ ಯೋಗವಾದುದಲ್ಲ. ವಿಧಿಯು ನಿನ್ನನ್ನು ಯಾವ ನಾಚಿಕೆಯಿಲ್ಲದವನ ಕೈ ಯಲ್ಲಿಟ್ಟನೋ, ಇದುಕೂಡ ಆತನ ಪತ್ನಿಗೇ ! ಉಪಯುಕ್ತವಾದುದು.

ಸತೀದೇವಿ—ತಂದೆಯೇ! ನಿಷ್ಕಾರಣವಾಗಿ ತಾವು ಅವರನ್ನು ನಾಚಿಕೆ ಯಿಲ್ಲದವನೆಂದು ಬೈಯ್ಯುವುದೇಕೆ ?

ದಕ್ಷ—ಕೆಂಡಗಣ್ಣಿನಿಂದ ಸತೀದೇವಿಯನ್ನು ನೋಡುತ, ಏನು ! ನಾಚಿಕೆಯಿಲ್ಲದವನೆಂದರೆ ಬೈದಂತೆಯೋ ? ಆಕಾಶವೇ ಯಾವನಿಗೆ ವಸನ ವೋ, ಹೆಂಗಸು, ಗಂಡಸು, ಹುಡುಗ, ಮುದುಕ ಯಾರೆದುರಿಗಾದರೂ ಬತ್ತಲೆಯಾಗಿರುವುದಕ್ಕೆ ಯಾವನಿಗೆ ಸಂಕೋಚವಿಲ್ಲವೋ, ಕೈಲಾಸದಂ ತಹ ರಾಜ್ಯವಿದ್ದುಕೂಡ ಯಾವನು ಭಿಕ್ಷುಕನೋ, ಅಂತಹವನನ್ನು ಲಜ್ಜಾ ಹೀನನೆಂದು ಹೇಳುವುದು ಬೈದಂತೆಯೋ ? ಕೇವಲದುರಾಚಾರಿಯೊಂದು ಸ್ವರ್ಗದಲ್ಲಿಕೂಡ ಅವನಿಗೆ ತಾವಿಲ್ಲ, ಮನೆಯಾದರೋ ಸ್ಮಶಾನ, ಛಂದನವೋ, ಚಿತಾಭಸ್ಮವೋ, ಅಮೃತ ಮತ್ತು ವಿಷವೂ ಯಾವನಿಗೆ ಸಮಾನವೋ,

ಅವನು ನಾಚುಗೆಗೆಟ್ಟವನಲ್ಲ. ಅವನು ಉನ್ಮತ್ತನು ! ಅವನು ಬಗೆಬಗೆ ಯಲ್ಲೂ ಜ್ಞಾನಹೀನನು.

ಸತೀದೇವಿ—ತಂದೆಯೇ ? ಆತನು ನಾಚುಗೆಯಿಲ್ಲದಾತನೇ ಆಗಲಿ, ಅಥವ ಉನ್ಮತ್ತನೇ ಆಗಲಿ, ಆತನೇ ನನಗೆ ಪರಮದೈವವು ! ತಾವು ನಿಷ್ಕಾರಣವಾಗಿ ನಿಂದಿಸಬಾರದು. ಆತನನಿಂದಾವಾಕ್ಯವನ್ನು ಕೇಳುವುದಕ್ಕಿಂತಲೂ ಮರಣವೇ ನನಗೆಶ್ರೇಯಸ್ಸು.

ದಕ್ಷನವೈಯೆಲ್ಲವೂ ಕ್ರೋಧವಶವಾಗಿ ನಡುಕ ಹುಟ್ಟಿತು. ಆಸಮಯದಲ್ಲಿ ಅವನು ಯೇನಹೇಳುತಿರುವನೆಂಬದು ಗೊತ್ತಾಗದೆ ಕಟಕಟನೆ ಹಲ್ಲುಕಡಿಯುತ

ಎಲಾ ದುರ್ವಿನೀತೇ ! "ಇಷ್ಟುಮಟ್ಟಿಗೆ ಸ್ಪಷ್ಟವಾಯ್ತು."

ಸತೀದೇವಿ—ತಂದೆಯೇ ! ಪ್ರಸನ್ನನಾಗಿ ಕ್ಷಮಿಸು, ಅಥವ ನಾನು ಯಾವ ಅಪರಾಧವನ್ನು ಮಾಡಿರುವೆನೆಂಬುದನ್ನು ತಿಳಿಸು, ಅಂತಹ ಅಪರಾಧವೇನಾದರೂ ಇದ್ದರೆ ಅದಕ್ಕೆ ಪ್ರಾಯಶ್ಚಿತ್ತವಿಲ್ಲವೇ ?"

ದಕ್ಷ—"ಪ್ರಾಯಶ್ಚಿತ್ತವು ನಿನಗೆ ಮರಣವೆ ! ಯೆಂದಾದರೆ ನೀನು ಸಾಯುವೆ; ಆ ಸಂಗತಿಯನ್ನೆಂದು ನಾನು ಕೇಳುವೆನೋ ; ಆ ದಿನವೇ ಆ ಅಧಮಾಧಮನ ಸಂಪರ್ಕವು ನನಗೆ ತಪ್ಪುವುದು. ಯಾವಾಗ ಅದು ತಪ್ಪುವುದೋ, ಆಗಲೆ ! ಅವನಲ್ಲಿ ನನಗೆ ದ್ವೇಷಾಸೂಯೆಗಳು ನಾಶಗೊಂಡಾವು.

ಸತೀದೇವಿ—ಇದೇನೋ ; ನನಗೆ ತಮ್ಮ ಆಜ್ಞೆಯು ? ನನ್ನ ಸಾವಿನವಿನಾ ನೀವು ಶಾಂತರಾಗುವುದಿಲ್ಲ ? ನನ್ನ ಸಾವಿನವಿನಾ ನೀವು ಶಾಂತರಾಗುವುದಿಲ್ಲ ?"

ದಕ್ಷ—"ಇಲ್ಲ."

ಸತೀದೇವಿ—"ತಂದೆಯೇ ! ಈಗ ಹಾಗೆಯೇ ಆಗಬಹುದು. ಯಾವಾಗ ನನ್ನ ಸಾವಿನಿಂದ ನೀವು ರಾಗದ್ವೇಷವಿಲ್ಲದವರಾಗುವಿರೋ, ಆಗ ಅದಕ್ಕೂ ಹೆಚ್ಚಾದ ಆನಂದಾನುಭವವು ಮತ್ತಾವುದು ! ನಾನೇನೋ; ತಮ್ಮ ಅನುಜ್ಞಾಪರಿಪಾಲನ ಮಾಡುವೆನು. ಆದರೆ ತಾವು ದಯೆಯಿಟ್ಟು ಮತ್ತೊಂದುಸಲ ಹೇಳಿ, ಇದೇಯೋ, ನನಗೆ ತಮ್ಮ ಆದೇಶವು."

ದಕ್ಷ—"ದಕ್ಷಪ್ರಜಾಪತಿಯು ಮಾತು ಯೆಂದೆಂದಿಗೂ ಬದಲಾಯಿಸಲಾರದು. ನಾನು ಪ್ರೊಂದುಬಾರಿ ಹೇಳಿದುದನ್ನೇ ಮತ್ತೆ ಬಾರಿಬಾರಿಗೂ ಹೇಳುತ್ತಿರುವೆನು."

"ನಿನ್ನ ಸಾವಿನಿಂದಲ್ಲದೆ ನನಗೆ ಕೋಪ ಶಾಂತವಾಗದು."

"ನಿನ್ನ ಸಾವಿನಿಂದಲ್ಲದೆ ನನಗೆ ಕೋಪ ಶಾಂತವಾಗದು."

"ನಿನ್ನ ಸಾವಿನಿಂದಲ್ಲದೆ ನನಗೆ ಕೋಪ ಶಾಂತವಾಗದು."

ದಕ್ಷನ ವ್ಯವಹಾರವನ್ನು ನೋಡಿ ಸಭೆಯಲ್ಲೆಲ್ಲರೂ ಸ್ತಬ್ಧರಾಗಿಬಿಟ್ಟರು. ಸಾಧುಗಳನೇಕರು ಆ ಸ್ಥಳವನ್ನು ಬಿಟ್ಟು ಹೊರಟೇಹೋದರು. ತಂದೆಯ ಮಾತನ್ನು ಕೇಳಿ ಸತೀದೇವಿಯು ಬೇರೆ ಯಾವ ಮಾತನ್ನೂ ಆಡಲಿಲ್ಲ. ಕೂಡಲೆ ತಂದೆಗೆ ನಮಸ್ಕಾರಮಾಡಿ ಬೇಗ ಬೇಗ ಯಜ್ಞಕುಂಡದ ಮಗ್ಗುಲಿಗೆ ಬಂದು ಯೋಗಾಸನದಲ್ಲಿ ಉತ್ತರಾಭಿಮುಖವಾಗಿ ಕುಳಿತು ತಾನುಟ್ಟಿರುವ ಗೈರಿಕವಸನವನ್ನು ಆಪಾದಮಸ್ತಕಾಂತವಾಗಿ ಸುತ್ತಿಕೊಂಡಳು. ಸಭೆಯಲ್ಲಿರುವ ಸಮಸ್ತರೂ ವಿಸ್ಮಿತರಾಗಿ, ಚಿತ್ರಪ್ರತಿಮೆಗಳಂತಾಗಿ, ಆ ವಿಚಿತ್ರವನ್ನು ನೋಡುತ್ತಿದ್ದರು. ಆಕೆಯ ಉದ್ದೇಶ್ಯವನ್ನು ಕುರಿತು ಯಾರೂ, ಏನನ್ನೂ ಹೇಳದೆ ಯಿದ್ದರಲ್ಲದೆ, ಸಮಯೋಚಿತವಾಗಿ ಯಾರೂ ಆಕೆಯನ್ನು ಸಮಾಧಾನಪಡಿಸಲು ಪ್ರಯತ್ನಿಸಲಿಲ್ಲ. ನೋಡುತನೋಡುತ ಸತೀದೇವಿಯ ಶರೀರದಿಂದ ಪ್ರೊಂದು ಬಗೆಯ ಅಪೂರ್ವಜ್ಯೋತಿಯು ಹೊರಗಾಗಿ, ಅದರ ಪ್ರಭೆಯು ಹೋಮಕುಂಡದ ಅಗ್ನಿಯನ್ನು ನಿಸ್ತೇಜವಾಗಿಸಿ, ಆ ಜ್ಯೋತಿಯು ಸತೀದೇವಿಯ ಬ್ರಹ್ಮರಂಧ್ರದಿಂದ ಹೊರಗಾದ ಜ್ಯೋತಿಯೊಡನೆ ಕಲೆತು, ಆಕಾಶದಲ್ಲಿ ಲೀನವಾಗಿಬಿಟ್ಟಿತು. ಪ್ರೊಡೆದ ದೇವೀವಿಗ್ರಹದಂತೆ ಸತೀದೇವಿಯ ಮೃತದೇಹವು ಕ್ಷಣಮಾತ್ರದಲ್ಲಿ ನೆಲಕ್ಕುರುಳಿತು.

ದಕ್ಷಯಜ್ಞದ ಪರಿಣಾಮವೇನಾಯಿತೆಂಬುದನ್ನು ವಿವರಿಸುವುದು ನಿಷ್ಪ್ರಯೋಜನವು. ತಾಯಿಯನ್ನು ಕೊಂದವನನ್ನು ಪ್ರತೀಕಾರದ ಮರ್ಧನಾದ ಸುಪುತ್ರನು ಯಾವಬಗೆಯಾಗಿ ಧ್ವಂಸಮಾಡುವನೋ, ಆ ಬಗೆಯಲ್ಲಿ ಕೈಲಾಸಾಧಿಪತಿಯ ಅನುಚರಗಣವು ಬಂದು ದಕ್ಷಪ್ರಜಾಪತಿಯನ್ನು ನಿರ್ನಾಮಮಾಡಿದರು. ಯಾವ ಸ್ಥಳದಲ್ಲಿ ದಕ್ಷಪ್ರಜಾಪತಿಯು ಮೋಘಗ

ಳನ್ನು ಮುಟ್ಟುವ ಅರಮನೆಯಿದ್ದಿತೋ, ಆ ಸ್ಥಳದಲ್ಲಿ ಈಗ ಅದರ ಗುರುತುಕೂಡ ಯಿಲ್ಲ. ಸತೀದೇವಿಯು ಯಾವ ಸ್ಥಳದಲ್ಲಿ ಪ್ರಾಣತ್ಯಾಗ ಮಾಡಿದಳೋ, ಆ ಸ್ಥಳದಲ್ಲಿ ವೊಂದು ಹೋಮಗುಂಡಮಾತ್ರ ಈಗಲೂ ವೀಕ್ಷಣಕ್ಕೆ ಕಾಣುತಿದೆ. ಕನಖಲನಗರವು ಪೂರ್ವದಂತೆ ಶೋಭಿಸುತಿಲ್ಲ. ಸಂಪತ್ತೆಲ್ಲವೂ ನಾಶವಾಯಿತು. ಸತೀದೇವಿಯ ಅವಮಾನರೂಪವಾದ ಪಾಪಫಲದಿಂದ ಕನಖಲನಗರವು ಸ್ಮಶಾನಸದೃಶವಾಯಿತು. ಗಂಗಾನದಿಯೊಂದುಮಟ್ಟಿಗೆ ಪೂರ್ವದಂತೆಯೇ ಈಗಲೂ ಕಲಕಲನಿನಾದದಿಂದ ಅದರ ಮಗ್ಗುಲಲ್ಲಿ ಪ್ರವಹಿಸುತ ಈ ಪೂರ್ವಕಥೆಯನ್ನು ಪ್ರಪಂಚದಲ್ಲಿ ಪ್ರಸಾರಗೊಳಿಸುತಿದೆ.

ಮುಗಿಯಿತು



# ಸವಿನುಡಿ.

## ಕನ್ನಡನುಡಿಯ ಮಾಸಪುಸ್ತಕಾವಳಿ.

ಅಚ್ಚಾಗುತಿದೆ !! **ಭುವನಮೋಹಿನಿ** ಅಚ್ಚಾಗುತಿದೆ !!!

"ಶಕ್ತಿ" ಮಾಧವೀಕಂಕಣ ಮುಂತಾದ ನವನ್ಯಾಸ, (ನಾವಲು)ಗಳ ನ್ನೋದಿರುವ ಸಮಸ್ತಗ್ರಾಹಕರೂ ಯಿದನ್ನು ಅಗತ್ಯವಾಗಿ ಓದತಕ್ಕುದು.

ಅಚ್ಚಾಗುತಿದೆ !! **ಜಮೀನ್ದಾರ.** ಅಚ್ಚಾಗುತಿದೆ !!!

ಸಾಂಸಾರಿಕ ಸಂಬಂಧಿಯಾದ ಅತ್ಯದ್ಭುತ ಚಿತ್ರಪ್ರದರ್ಶನ ಮಾಡು ವುದು. ಪ್ರತಿಯೊಬ್ಬ ಗೃಹಸ್ಥನೂ ಓದತಕ್ಕುದು.

ಅಚ್ಚಾಗುತಿದೆ !! **ಶ್ರೀ ಶಾಙ್ಗ೯ಧರಸಂಹಿತೆ.** ಅಚ್ಚಾಗುತಿದೆ !!!

ವೈದ್ಯಶಾಸ್ತ್ರದಲ್ಲಿ ಅತ್ಯಂತ ಶ್ರೇಷ್ಠವಾದ ಅಪೂರ್ವಗ್ರಂಥ.

ಅಚ್ಚು ಪೂರೈಸುವುದರೊಳಗಾಗಿ ಅಪೇಕ್ಷಿಸುವವರಿಗೆ ಅತ್ಯಂತ ಸುಲಭಕ್ರಯ !!!

ಆರ್ಷೇಯದಿಂದ ವೈದ್ಯ ಸಂಪ್ರದಾಯಪ್ರವರ್ತಕರೆಂದು ಸುಪರಿಚಿತರೂ, ಸುಪ್ರಸಿದ್ಧರೂ, ಆದ ಭಾರತೀ ವೆಂಕಪ್ಪನವರಿಂದ ರಚಿಸಲ್ಪಟ್ಟ ಕರ್ಣಾಟಕ ಭಾಷಾ ಟೀಕೆಯ ಬಹು ಪುರಾತನ ಪ್ರತಿಯನ್ನು ಅನೇಕ ಭಾಷಾಪರಿಚಯವುಳ್ಳ ತತ್ಪೌತ್ರ ಭಾರತೀ ಸಂಪಂಗಿರಾಮನಿಂದ ಬೆಂಗಾಲಿ, ಹಿಂದಿ, ಮಹಾರಾಷ್ಟ್ರ, ದ್ರವಿಡಾಂಧ್ರ ಭಾಷೆಗಳ ಪೂರ್ವ ಪ್ರತಿಗಳನ್ನು ಅನುಸರಿಸಿ ಲೇಖಕಪ್ರಮಾದಜನಿತದೋಷಗಳು ಸವರಿಸಲ್ಪಟ್ಟು ಲೋಕಹಿತಾರ್ಥವಾಗಿ ಪ್ರಕಟೀಕರಿಸಲ್ಪಡುವುದು. ಪ್ರಥಮ, ಮಧ್ಯಮ, ಉತ್ತರ ಖಂಡಗಳೆಂಬ ಮೂರು ಭಾಗಗಳಾಗಿರುವ ಯಿ ಗ್ರಂಥವು ಯೆಂಟುನೂರು ಪುಟಗಳಿಗೆ ಹೆಚ್ಚಾಗಿಯೇ ಆಗಬಹುದಾದ ದೊಡ್ಡ ಪುಸ್ತಕವಾಗುವುದು. ಅಚ್ಚು ಪೂರೈಸುವುದರೊಳಗೆ ನಮ್ಮ ಪದ್ಧತಿಯಂತೆ ಮುಂಗಡಮೊಡನೆ ಅಪೇಕ್ಷಿಸುವವರಿಗೆ ನೂರು ಪುಟಗಳಿಗೆ ನಾಲ್ಕಾಣೆಯಂತೆ ಕೊಡುವೆವು. ಬಿಳಿಕ ಮೂರು ರೂಪಾಯಿ ಬೆಲೆಯಾಗುವುದು. ಅಂಚೆಯವೆಚ್ಚ ಬೇರೆ. ಬೇಗಬೇಗ ವಿಳಾಸಗಳನ್ನು ಮುಟ್ಟಿಗೆ ಕೊಡಿ.

ಭಾರತಿ ಸಂಪಂಗಿರಾಮು,

ಸವಿನುಡಿಯ ಸಂಪಾದಕ,

೪೨. ಸಿ, ಬೀದಿ, ಕೋಟೆ, ಬೆಂಗಳೂರು ಟಿಸಿ,

# ಸ ವಿ ನು ಡಿ.

## ಕನ್ನಡನುಡಿಯ ಮಾಸಪುಸ್ತಕಾವಳಿ.

ನಾಡಿಗರು ಕೆಟ್ಟದನ್ನಾದರೂ, ಒಳ್ಳೆಯದನ್ನಾದರೂ, ಅನುಭವಿಸುವಂತೆ ಮಾಡತಕ್ಕ ನಿರಂಕುಶಾಧಿಕಾರವುಳ್ಳ ವೊಂದು ಬಗೆಯ ಅದ್ಭುತ ಶಕ್ತಿಯುಳ್ಳದು ದೇಶ ಭಾಷೆಯೆಲ್ಲವೇ ! ಇಂತಹ ಶಕ್ತಿಯುಳ್ಳ ವಾಙ್ಮಯದಲ್ಲಿ ತಕ್ಕ ಗ್ರಂಥಗಳಿಲ್ಲದಿರುವ ಭಾಷೆಯು ವ್ಯವಹಾರದಲ್ಲೂ, ಜ್ಞಾನಾಭಿವೃದ್ಧಿಯಲ್ಲೂ, ಜನಕ್ಕೆ ಒಂದೂ ಬಾರದತೆಯಿರುವುದರಿಂದ [illegible], [illegible] ಹೋಗಿ [illegible]ಬಿಡುವುದು. ಈ ಅರ್ಥದಲ್ಲಿ ದೇಶಾಭ್ಯುದಯಕ್ಕೆ ಭಾಷಾಭಿವೃದ್ಧಿಯೇ ಮೂಲಾಧಾರವೆಂದು ವೊತ್ತಿ ನುಡಿಯಬೇಕಾದುದಿಲ್ಲ. ದೇಶಭಾಷೆಗಳ ಗ್ರಂಥಸಂಗ್ರಹವೂ, ವೃತ್ತಾಂತಪತ್ರಿಕೆಗಳೂ, ಮಾಸಸಂಚಿಕೆಗಳೂ, ಕಾರಣಾಂತರದಿಂದ ಯಿಲ್ಲದಂತಾದಾಗ ಆ ದೇಶವು ತನ್ನ ಆದಿಯುಗದ ಅನಾಗರಿಕತೆಗೆ ಯಿಳಿಯುವುದೆಂದು ಹೇಳುವುದು ಅತ್ಯುಕ್ತಿಯಾಗದು.

ಈ ಅಭಿಪ್ರಾಯವನ್ನು ಮನಸಿನಲ್ಲಿಟ್ಟು ನಾವು ದೇಶಭಾಷೆಯಲ್ಲಿ ಗ್ರಂಥಗಳನ್ನು ಪ್ರಕಟಿಸಲು ಪ್ರಯತ್ನಿಸಿದೆವು. ಯಿದರಲ್ಲಿ ವ್ಯಕ್ತಿಚರಿತ್ರೆಗಳೂ, ಚರಿತ್ರೆಯ ಮತ್ತು ಪೌರಾಣಿಕಸಂಬಂಧಯಾದ ನವನ್ಯಾಸ (ನಾವಲ್) ಗಳೂ. ಯಿನ್ನೂ ಬಗೆಬಗೆಯ ಗ್ರಂಥಗಳೂ, ಪ್ರಚುರವಾಗಿವೆ.

ಈ ಗ್ರಂಥಗಳನ್ನು ಮುಂದೆ ಶಾಶ್ವತ ಚಂದಾದಾರರ ಪದ್ಧತಿಯಂತೆ ಮಾರಲ್ಪಡುವುದು. ನಾವು ಯಿದುವರೆಗೆ ಪ್ರಕಟಿಸಿರುವವನ್ನುಂದೆ ಪ್ರಕಟಿಸುವ ಪುಸ್ತಕಗಳೆಲ್ಲವನ್ನೂ ಕೊಂಡುಕೊಂಡವರು ನಮಗೆ ಶಾಶ್ವತ ಚಂದಾದಾರರು. ಅಂತಹವರಿಗೆ ನೂರುಪುಟಗಳಿಗೆ ಅಂಚೆವೆಚ್ಚ ವಿನಾ, ನಾಲ್ಕಾಣೆಯಂತೆ ಯೂ, ಇತರರಿಗೆ ಆರಾಣೆಯಂತೆಯೂ, ಕೊಡುವೆವು. ಶಾಶ್ವತಚಂದಾದಾರರು ಪ್ರತಿಯೊಬ್ಬರೂ ಪ್ರವೇಶಧನವಾಗಿ ಯೆಂಟಾಣೆಯ ಮಟ್ಟಿಗೆ ಮುಂಗಡ ಕೊಡತಕ್ಕದ್ದು. ಮೊತ್ತ ಮೊದಲಿನ ವಿ. ಪಿ. ಭಾಂಗಿಯಲ್ಲಿ ಯಿದನ್ನು ಹಿಡಿಕೊಳ್ಳುವೆವು. ಭಾಂಗಿಯನ್ನು ಹಿಂದಿರುಗಿಸುವವರಿಗೆ ಮುಂಗಡ ಕೊಟ್ಟ ಹಣವು ಖಂಡಿತವಾಗಿ ಹಿಂದಕ್ಕೆ ಬರಲಾರದು.

ಚಂದಾದಾರರಾಗಲಿಷ್ಟವುಳ್ಳವರೂ, ಪತ್ರವ್ಯವಹಾರವನ್ನಿಡಲಿಚ್ಛಿಸುವರೂ, ತಮ್ಮ ನಾಮಧಾಮಗಳನ್ನು ವಿಶದವಾಗಿ ಸ್ಫುಟವಾದ ಅಕ್ಷರಗಳಿಂದ ಬರೆಯತಕ್ಕುದು. ತಮ್ಮ ತಮ್ಮ ವಿಳಾಸಗಳು ಬದಲಾದಾಗ ಆ ಸಂಗತಿಯನ್ನು ಕೂಡಲೆ ನಮಗೆ ತಿಳಿಸತಕ್ಕುದು. ಪ್ರತ್ಯುತ್ತರಾಪೇಕ್ಷಿತರು ರಿಪ್ಲೈ ಕಾರ್ಡು ಅಥವ ಅರ್ಧಾಣೆಯ ಲೇಬಿಲನ್ನು ಕಳಿಸತಕ್ಕುದು.

ಭಾರತಿ ಸಂಪಂಗಿರಾಮು, ಸವಿನುಡಿಯ
ಸಂಪಾದಕ.
೪೨ ಸಿ, ಬೀದಿ, ಕೋಟೆ, ಬೆಂಗಳೂರು.